# ಸೆರೆಮನೆಯಿಂದ ಮಸೀದಿಗೆ

ಲೇಖಕರು

ಅಬ್ದುಲ್ಲಾ ಅಡಿಯಾರ್

ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

## ಪ್ರಕಾಶಕರ ಮಾತು

"ನಾನ್ ಕಾದಲಿಕ್ಕುಮ್ ಇಸ್ಲಾಮ್"(ನನ್ನ ಪ್ರೀತಿಯ ಧರ್ಮ) ಎಂಬ ಕೃತಿಯ ಮೂಲಕ ಖ್ಯಾತಿ ಗಳಿಸಿದ ತಮಿಳುನಾಡಿನ ಹಿರಿಯ ಪತ್ರಕರ್ತ, ಸಾಹಿತಿ ಹಾಗೂ ಕವಿ ಶ್ರೀ ಅಡಿಯಾರ್ ಪ್ರಭಾವಿ ರಾಜಕಾರಣಿಯೂ ಆಗಿದ್ದರು. ಅನೇಕ ಭಾಷೆಗಳಲ್ಲಿ ತರ್ಜುಮೆಯಾಗಿ ಆ ಪುಸ್ತಕವು ಜನರ ಹೃದಯಗಳನ್ನು ಇಸ್ಲಾಮಿನತ್ತ ಆಕರ್ಷಿಸಿತ್ತು. 1987ರಲ್ಲಿ ಅವರು ಇಸ್ಲಾಮ್ ಸ್ವೀಕರಿಸಿ 'ಅಬ್ದುಲ್ಲಾ' ಎಂಬ ನಾಮಕರಣ ಮಾಡಿಕೊಂಡರು.

ಇಸ್ಲಾಮಿನತ್ತ ಪ್ರಯಾಣದ ಕತೆಯನ್ನು ಬಹಳ ಮನೋಜ್ಞವಾಗಿ ವಿವರಿಸಿ ಅವರು ಇನ್ನೊಂದು ಪುಸ್ತಕವನ್ನು ಬರೆದರು. 'ಚಿರೈ ಶಾಲೆಯಿಲಿರುಂದು ಪಳ್ಳಿವಾಯಿಲ್‌ವರೈ' ಎಂಬ ಆ ಪುಸ್ತಕದ ಪರಿಷ್ಕೃತ ನಾಲ್ಕನೆಯ ಮುದ್ರಣವೇ ವಾಚಕರ ಕೈಯಲ್ಲಿರುವ 'ಸೆರೆಮನೆಯಿಂದ ಮಸೀದಿಗೆ' ಎಂಬ ಈ ಕೃತಿ. ಇದು ಕೇವಲ ಅವರ ಪ್ರಯಾಣ ವೃತ್ತಾಂತವಲ್ಲ. ಬದಲಾಗಿ ಈ ಕೃತಿಯಲ್ಲಿ ಅವರು ಇಸ್ಲಾಮಿನ ಮೂಲಭೂತ ಸಿದ್ಧಾಂತವನ್ನೂ ಅದರ ಆಚಾರ ಕರ್ಮಗಳನ್ನೂ ಹಾಗೂ ನೀತಿ-ನಿಯಮಗಳನ್ನೂ ಮನಮುಟ್ಟುವ ಶೈಲಿಯಲ್ಲಿ ವಿಶದೀಕರಿಸಿದ್ದಾರೆ. ಇಸ್ಲಾಮಿನ ಕುರಿತು ಜನಮನದಲ್ಲಿರುವಂತಹ ತಪ್ಪು ತಿಳುವಳಿಕೆಗಳನ್ನು ನೀಗಿಸಲು ಇದರಲ್ಲಿ ಪ್ರಯತ್ನಿಸಿದ್ದಾರೆ. ಕನ್ನಡ ಜನತೆಯು ಇದರ ಪೂರ್ಣ ಪ್ರಯೋಜನ ಪಡೆಯಲೆಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಗ್ರಂಥಕರ್ತರ ಪರಿಚಯ

ಗ್ರಂಥಕರ್ತರಾದ ಅಡಿಯಾರ್ 1935ರಲ್ಲಿ ಕೊಯಮುತ್ತೂರಿಗೆ ಸಮೀಪದ ತಿರುಪ್ಪೂರ್‌ನಲ್ಲಿ ಜನಿಸಿದರು. 1955ರಲ್ಲಿ ಮೆಟ್ರಿಕ್ಯುಲೇಶನ್ ಪರೀಕ್ಷೆ ಮುಗಿದ ಕೂಡಲೇ ಅವರು 'ಮುರಸೋಲಿ' ದೈನಿಕದ ಉಪ ಸಂಪಾದಕರಾದರು. ವಿದ್ಯಾರ್ಥಿಯಾಗಿದ್ದಾಗಲೇ ಅವರು ಅನೇಕ ಲೇಖನಗಳನ್ನು ಬರೆದಿದ್ದರು. 1949ರಿಂದ ಬರೆಯುತ್ತಿದ್ದ ಲೇಖನಗಳು ಶಿಕ್ಷಣ ಮುಗಿದ ಕೂಡಲೇ ಅವರಿಗೆ ಆ ಹುದ್ದೆಯನ್ನು ಗಳಿಸಿಕೊಟ್ಟವು. ಆ ಪತ್ರಿಕೆಯಲ್ಲಿ ಅವರು ಬರೆಯುತ್ತಿದ್ದ 'ಮೈಲ್‌ಪೀಲಿ' ಎಂಬ ಅಂಕಣವು ವಾಚಕರನ್ನು, ವಿಶೇಷತಃ ಯುವಕರನ್ನು ಆಕರ್ಷಿಸಿತು. ಡಾ| ಎಂ. ಕರುಣಾನಿಧಿ ಪತ್ರಿಕೆಯ ಸಂಪಾದಕರಾಗಿದ್ದರು. ಅಡಿಯಾರ್ ಅವರು ಮುರಸೋಲಿಯಲ್ಲಿ ಹದಿನೇಳು ವರ್ಷ ಕೆಲಸ ಮಾಡಿದರು.

ಅವರು ಹದಿನೇಳು ನಾಟಕಗಳನ್ನು ಬರೆದು ಅವುಗಳಲ್ಲಿ ನಟಿಸಿದ್ದಾರೆ. 1982ರಲ್ಲಿ 'ಪಕ್ಷಿ' ಎಂಬ ಅವರ ಕವನ ಸಂಕಲನ ಪ್ರಕಾಶನಗೊಂಡಿದೆ. ಅಲ್ಪಾವಧಿಯಲ್ಲಿಯೇ ಅದರ ಇಂಗ್ಲೀಷ್ ಅನುವಾದವೂ ಪ್ರಕಟವಾಯಿತು. 'ನನ್ನ ನವಿಲು' ಎಂಬ ಅವರ ದ್ವಿತೀಯ ಕವನ ಸಂಕಲನವೂ ವಿವಿಧ ಭಾಷೆಗಳಿಗೆ ಅನುವಾದಗೊಂಡಿದೆ. ನಟ, ದಿಗ್ದರ್ಶಕ, ನಿರ್ದೇಶಕರಾಗಿ ಅಡಿಯಾರ್ ಸಿನೆಮಾ ರಂಗದಲ್ಲಿಯೂ ದುಡಿದಿದ್ದಾರೆ. 1982ರಲ್ಲಿ ತಮಿಳ್ನಾಡು ಸರಕಾರದ ಕಲೈಮಾಮಣಿ ಕಲಾ ಸಾಹಿತ್ಯ ಪ್ರಶಸ್ತಿಯನ್ನೂ ಅವರು ಗಳಿಸಿದರು.

ರಾಜಕೀಯದಲ್ಲಿಯೂ ಅಡಿಯಾರ್ ಪಳಗಿದವರು. ವಿದ್ಯಾರ್ಥಿ ಜೀವನದಲ್ಲಿಯೇ ರಾಜಕೀಯ ಒಲವು ಹೊಂದಿದ್ದ ಅಡಿಯಾರ್ 1949ರಲ್ಲಿ 'ದ್ರಾವಿಡ ಕಳಗಮ್' ಪಕ್ಷವನ್ನು ಸೇರಿದರು. ಡಿ.ಎಂ.ಕೆ. ಧುರೀಣರು ಅಡಿಯಾರ್‌ರನ್ನು ಯುವ ಜನಾಂಗದ ಸಮರ್ಥ ರಾಜಕೀಯ ನಾಯಕನೆಂದು ಗುರುತಿಸಿದರು. ಪಕ್ಷದ ಬೆಳವಣಿಗೆಯಲ್ಲಿ ಅಡಿಯಾರ್‌ರ ಬರಹಗಳು ಗಮನಾರ್ಹ ಪಾತ್ರ ವಹಿಸಿವೆ.

1976ರಲ್ಲಿ ತುರ್ತುಸ್ಥಿತಿಯ ವೇಳೆ ಕೇಂದ್ರ ಸರಕಾರವು ಡಿ.ಎಂ.ಕೆ. ಸಚಿವ ಸಂಪುಟವನ್ನು ಬರ್ಖಾಸ್ತುಗೊಳಿಸಿತು. ಬಂಧಿತರ ಯಾದಿಯಲ್ಲಿ ಅಡಿಯಾರ್ ಮೊದಲಿಗರಾಗಿದ್ದರು. ಮೀಸಾದನ್ವಯ ಅವರನ್ನು ಬಂಧಿಸಲಾಗಿತ್ತು. ಸ್ವಭಾವತಃ ಕಟು ವಿಮರ್ಶಕರಾಗಿದ್ದ ಅಡಿಯಾರ್ ಜೈಲಿನ ಕ್ರಮಗಳನ್ನು ಪ್ರತಿಭಟಿಸಿದರು. ಜೈಲಧಿಕಾರಿಗಳು ಅವರೊಂದಿಗೆ ಹುಚ್ಚಾಬಟ್ಟೆ ವರ್ತಿಸಿದರು. ಘೋರ ಕೈದಿಗಳ ಮೂಲಕ ಅವರನ್ನು ಮರ್ದಿಸುತ್ತಿದ್ದರು. ತೀವ್ರ ಪ್ರಹಾರದಿಂದ ಅವರ ಉದರ ಬಿರಿದು ಕರುಳು ಹೊರಬಂತು. ಮೃತ್ಯು ಅವರ ಕಣ್ಣ ಮುಂದೆ ಸುಳಿದಾಡಿತು!

ಆ ತನಕ ನಾಸ್ತಿಕವಾದಿಯಾಗಿದ್ದ ಅಡಿಯಾರ್‌ರಿಗೆ ದೇವನ ನೆನಪಾಯಿತು. ಅವರು ಸೆರೆಮನೆಯಲ್ಲಿ ಧರ್ಮಗ್ರಂಥಗಳನ್ನು ಓದಲಾರಂಭಿಸಿದರು. ಜೈನ, ಬೌದ್ಧ, ಕ್ರೈಸ್ತ ಮತ್ತು

ಇಸ್ಲಾಮ್ ಧರ್ಮಗ್ರಂಥಗಳ ಅಧ್ಯಯನ ನಡೆಸಿದರು. ಸೆರೆಮನೆಯ ಆ ಭಯಾನಕ ದಿನಗಳಲ್ಲಿ ಇಸ್ಲಾಮ್ ಧರ್ಮವು ಅವರಿಗೆ ಧೈರ್ಯ ಕೊಟ್ಟಿತು. ಇದು ಅವರನ್ನು ಇಸ್ಲಾಮಿಗೆ ನಿಕಟಗೊಳಿಸಿತು. ಸೆರೆಮನೆಯಿಂದ ಬಿಡುಗಡೆಯಾದ ಬಳಿಕ ಅವರು ಬರೆದ 'ನನ್ನ ಪ್ರೀತಿಯ ಧರ್ಮ' ಬಹಳ ಪ್ರಸಿದ್ಧವಾಯಿತು.

1977ರಲ್ಲಿ ಸೆರೆಮನೆಯಿಂದ ಹೊರಬಂದ ಬಳಿಕ ಎಂ.ಜಿ.ಆರ್.ರ ಅಣ್ಣಾ ಡಿ.ಎಂ.ಕೆ. ಯಲ್ಲಿ ಸೇರಿದರು. ಪಕ್ಷದ ಚುನಾವಣಾ ಪ್ರಣಾಳಿಕೆಯ ರಚನಾ ಸಮಿತಿಯಲ್ಲಿ ಸ್ಥಾನ ಪಡೆದರು. ಪಾನ ನಿಷೇಧ ನೀತಿಯನ್ನು ಅಂಗೀಕರಿಸಬೇಕೆಂದು ಅಡಿಯಾರ್ ವಿನಂತಿಸಿದರು. ಅಬಕಾರಿ ಆದಾಯದ ನೆಪವೊಡ್ಡಿ ಎಂ.ಜಿ.ಆರ್. ಅವರು ಪಕ್ಷದ ಘೋಷಿತ ನೀತಿಯಿಂದ ಹಿಂದೆ ಸರಿದರು. ಈ ಭಿನ್ನಮತದಿಂದ ಅಡಿಯಾರ್ ಎ.ಡಿ.ಎಂ.ಕೆ.ಯ ಸಂಬಂಧ ಕಡಿದುಕೊಂಡರು.

ಆ ಬಳಿಕ ಅಡಿಯಾರ್ ಇಸ್ಲಾಮ್‌ನ ಕುರಿತು ಅಧ್ಯಯನ ಮತ್ತು ಗ್ರಂಥ ರಚನೆಯಲ್ಲಿ ತನ್ನನ್ನು ತೊಡಗಿಸಿಕೊಂಡರು. 'ನನ್ನ ಪ್ರೀತಿಯ ಧರ್ಮ'ದ ಬಳಿಕ ಅವರು 14 ಪುಸ್ತಕಗಳನ್ನು ಬರೆದಿದ್ದಾರೆ. ಅವರ ಪುಸ್ತಕಗಳನ್ನು ಅವರ ಸ್ವಂತ ಪ್ರಕಾಶನವಾಗಿರುವ 'ನೀರೋಟ್ಟಮ್' ಮೂಲಕ ಪ್ರಕಟಿಸಲಾಗುತ್ತಿತ್ತು.

ಅಡಿಯಾರ್ ಅವರು 1987ರ ಜೂನ್ 6ರಂದು ಇಸ್ಲಾಮ್ ಧರ್ಮವನ್ನು ಸ್ವೀಕರಿಸಿದರು ತನ್ನ ಮನಪರಿವರ್ತನೆಯ ಸ್ವರೂಪವನ್ನು ವಿವರಿಸಿ ಅಡಿಯಾರ್ ಬರೆದ 'ಚಿರೈಶಾಲೆಯಿಲಿರುಂದ ಪಳ್ಳಿವಾಯಿಲ್‌ವರ್ರೈ' ಎಂಬ ಪುಸ್ತಕದ ಕನ್ನಡಾನುವಾದವೇ 'ಸೆರೆಮನೆಯಿಂದ ಮಸೀದಿಗೆ' ಎಂಬ ಈ ಕೃತಿ.

---

# ಉತ್ತರ ಭಾರತದ ಪತ್ರ

ಅಬ್ದುಲ್ಲಾ ಅಡಿಯಾರ್ ಬರೆದ "ನಾನ್ ಕಾದಲಿಕ್ಕುಮ್ ಇಸ್ಲಾಮ್" ಎಂಬ ಪುಸ್ತಕವನ್ನು ವಿವಿಧ ಭಾಷೆಗಳಿಗೆ ಅನುವಾದಿಸಲಾಗಿದೆ. "ನನ್ನ ಪ್ರೀತಿಯ ಧರ್ಮ" ಎಂಬ ಹೆಸರಿನಲ್ಲಿ ಅದನ್ನು ಕನ್ನಡದಲ್ಲಿಯೂ ಪ್ರಕಟಿಸಲಾಗಿದೆ. ಆ ಪುಸ್ತಕದ ಹಿಂದಿ ಅನುವಾದವನ್ನು ಓದಿದ ನವದೆಹಲಿಯ ಓ.ಪಿ. ಗುಪ್ತಾರು ಪ್ರತಿಕ್ರಿಯೆಯಾಗಿ ಅಡಿಯಾರ್‌ರಿಗೆ ಬರೆದ(ಹಿಂದಿಯಲ್ಲಿ) ಸುದೀರ್ಘ ಪತ್ರದಲ್ಲಿ ಕೆಲವು ಸಂದೇಹಗಳನ್ನು ವ್ಯಕ್ತಪಡಿಸಿದ್ದರು. ಆ ಪತ್ರವನ್ನು ಮಿತ್ರರಿಂದ ಅನುವಾದಿಸಿ ಅಡಿಯಾರ್ ಉತ್ತರ ಬರೆದರು. ಶ್ರೀ ಗುಪ್ತಾರ ಪತ್ರವನ್ನು ಇಲ್ಲಿ ಕೊಡಲಾಗಿದೆ:

ನಾನು ವಿವಿಧ ಧರ್ಮ ಗ್ರಂಥಗಳನ್ನು ಬಹಳ ಆಸಕ್ತಿಯಿಂದ ಓದುವವನು. ನನಗೆ ಎಲ್ಲ ಧರ್ಮಗಳ ತಿರುಳನ್ನು ತಿಳಿಯಬೇಕೆಂಬ ಜಿಜ್ಞಾಸೆಯಿದೆ. ಇಸ್ಲಾಮ್ ಧರ್ಮದ ಅಧ್ಯಯನಕ್ಕಾಗಿ ಪವಿತ್ರ ಕುರ್‌ಆನನ್ನು ಎರಡು ಮೂರು ಬಾರಿ ಓದಿದ್ದೇನೆ. ಹಾಗೆಯೇ ಕೆಲವು ಇಸ್ಲಾಮೀ ಸಾಹಿತ್ಯಗಳನ್ನೂ ಓದಿದ್ದೇನೆ. ಈ ವಾಚನದಿಂದ ಇಸ್ಲಾಮಿನ ಬಗ್ಗೆ ನನ್ನಲ್ಲಿ ಗೌರವ ಭಾವನೆ ಮೂಡಿದೆ. ಅನೇಕ ತಪ್ಪು ತಿಳುವಳಿಕೆಗಳು ದೂರವಾಗಿ ಹಲವು ಹೊಸ ವಿಚಾರಗಳು ಮನಗಂಡಿವೆ.

ನಸೀಮ್ ಗಾಝಿಯವರು ಹಿಂದಿಗೆ ಅನುವಾದಿಸಿದ 'ನನ್ನ ಪ್ರೀತಿಯ ಧರ್ಮ' ಎಂಬ ನಿಮ್ಮ ಪುಸ್ತಕವನ್ನು ಓದಿದ್ದೇನೆ. ಅದರಲ್ಲಿ ನೀವು ಪ್ರವಾದಿ ಮುಹಮ್ಮದ್‌ರ(ಸ) ಕುರಿತು ಬರೆದಿರುವ ಎಲ್ಲ ವಿಷಯಗಳನ್ನೂ ಯಥಾವತ್ತಾಗಿ ಮೆಚ್ಚುತ್ತೇನೆ. ಅವರು ಬಹಳಷ್ಟು ಪ್ರಶಂಸಾರ್ಹರೆಂದೂ ಭಾವಿಸುತ್ತೇನೆ.

ಆ ಪುಸ್ತಕವನ್ನು ಓದಿದ ಬಳಿಕ ನನ್ನ ಮನದಲ್ಲಿ ಕೆಲವು ಪ್ರಶ್ನೆಗಳು ಹುಟ್ಟಿಕೊಂಡಿವೆ. ಅವುಗಳನ್ನು ಇಲ್ಲಿ ಬರೆಯುತ್ತಿದ್ದೇನೆ. ನೀವು ಉತ್ತರಿಸುವ ಕೃಪೆ ತೋರಿದರೆ ತುಂಬಾ ಉಪಕಾರವಾದೀತು. ತನ್ಮೂಲಕ ನನ್ನಲ್ಲಿರಬಹುದಾದ ತಪ್ಪು ತಿಳುವಳಿಕೆಗಳು ನಿವಾರಣೆಯಾಗಿ ಸತ್ಯವನ್ನು ಗ್ರಹಿಸುವಂತಾಗಬಹುದು.

- ನಿಮ್ಮ ಪುಸ್ತಕದ ಏಳನೇ ಪುಟ(ಹಿಂದಿ ಅನುವಾದ)ದಲ್ಲಿ ವೇದದ ಅರ್ಥವು 'ಬಚ್ಚಿಡು' ಅಥವಾ 'ಕಣ್ಣಿಗೆ ಕಾಣಿಸದಂತೆ ಇರಿಸು' ಎಂದು ಬರೆದಿದ್ದೀರಿ. ಅಂತೆಯೇ ವೇದವನ್ನು 'ಜ್ಞಾನ ಭಂಡಾರ'ವೆಂದೂ ಅದರಲ್ಲಿ ಹೇಳಲಾಗಿದೆ.

- ಪುಟ 13ರಲ್ಲಿ, "ಧರ್ಮಗಳ ಕ್ರಾಂತಿಕಾರೀ ನಾಯಕರು ಪ್ರಬಲ ವಿರೋಧ ಅನುಭವಿಸಿದ್ದರು. ಹಾಗಿದ್ದರೂ ಪ್ರವಾದಿ ಮುಹಮ್ಮದ್‌ರು(ಸ) ಅನುಭವಿಸಿದಂತಹ ಕಠಿಣ ವಿರೋಧವನ್ನು ಇನ್ನಾರೂ ಕಂಡಿಲ್ಲ"ವೆಂದು ನೀವು ಬರೆದಿದ್ದೀರಿ.

ಪ್ರವಾದಿವರ್ಯರು(ಸ) ಅಂತಹ ತೀಕ್ಷ್ಣ ವಿರೋಧವನ್ನು ಏಕೆ ಎದುರಿಸಬೇಕಾಯಿತು? ಇತರ ಧರ್ಮ ಪ್ರಚಾರಕರು ತಮ್ಮ ಸಂದೇಶಗಳನ್ನು ಪ್ರೇಮದಿಂದ ಪ್ರಚಾರ ಗೊಳಿಸಿದ್ದರು. ಅದೇ ವೇಳೆ ಪ್ರವಾದಿವರ್ಯರು(ಸ) ತಮ್ಮ ಸಂದೇಶವನ್ನು 'ಜಿಹಾದ್'ನಿಂದ ಅನ್ಯರ ಮೇಲೆ ಹೊರಿಸಿದ್ದು ಕಾರಣವಲ್ಲವೇ?

● ಅದೇ ಪುಟದಲ್ಲಿ; ಚಿತ್ರ, ಕಲ್ಲು, ವಿಗ್ರಹ ಇತ್ಯಾದಿಗಳನ್ನು ಆರಾಧಿಸಬಾರದೆಂಬ ತತ್ವವನ್ನು ಪ್ರವಾದಿವರ್ಯರಂತೆ(ಸ), ಜಗತ್ತಿನಲ್ಲಿ ಯಾವೊಬ್ಬ ಕ್ರಾಂತಿಕಾರಿಯೂ ಪ್ರಚಾರಪಡಿಸಿಲ್ಲವೆಂದು ಹೇಳಿದ್ದೀರಿ.

ಆರ್ಯ ಸಮಾಜದ ಸ್ಥಾಪಕ ಸ್ವಾಮಿ ದಯಾನಂದರೂ ಆ ತತ್ವವನ್ನೇ ಪ್ರತಿಪಾದಿಸಿದ್ದರು. ಆದರೆ ಅವರು ದೇವ ಮಂದಿರಗಳಿಂದ ವಿಗ್ರಹಗಳನ್ನು ತೆಗೆಯಲಿಲ್ಲ.

● ಪುಟ 14ರಲ್ಲಿ ಹೀಗೆ ಬರೆದಿದ್ದೀರಿ: "ರಶ್ಯಾದಲ್ಲಿ ಕಮ್ಯೂನಿಸ್ಟ್ ಸರಕಾರವಿದೆ. ಅವರು ದೇವನನ್ನು ನಿರಾಕರಿಸುತ್ತಾರೆ. ಆದರೆ ಅವರಿಗೆ ಮೂರ್ತಿಗಳನ್ನು ನೀಗಿಸುವ ಅಥವಾ ಅಳಿಸುವ ಧೈರ್ಯವಿಲ್ಲ."

ಇಲ್ಲಿ 'ಧೈರ್ಯ' ಎಂಬ ಪದ ಪ್ರಯೋಗವೇ ಅಪ್ರಸ್ತುತ. ಏಕೆಂದರೆ ರಶ್ಯಾದಲ್ಲಿ ಸರಕಾರವು, ಅಧಿಕಾರ ಬಲದಿಂದಲೇ ಆ ಕಾರ್ಯವನ್ನು ನಿರ್ವಹಿಸಬಹುದು. ಆದರೆ ಅವರು ಹಾಗೆ ಮಾಡಿಲ್ಲ. ಇಸ್ಲಾಮಿನ ಶಿಕ್ಷಣಗಳು ಸನ್ಮಾರ್ಗದಾಯಕ ನಿಜ. ಆದರೆ ರಟ್ಟೆ ಬಲದಿಂದ ವಿಗ್ರಹಗಳನ್ನು ತೊಲಗಿಸಿದ್ದು ಇಸ್ಲಾಮ್ ಧರ್ಮಕ್ಕೆ ಭೂಷಣವಲ್ಲ. ರಶ್ಯಾದಲ್ಲಿ ಬಲ ಪ್ರಯೋಗದಿಂದ ವಿಗ್ರಹಗಳನ್ನು ನೀಗಿಸಲಿಲ್ಲ. ಏಕೆಂದರೆ ಆರಾಧನಾ ಸ್ವಾತಂತ್ರ್ಯದ ದಮನವು ಮಾನವೀಯ ಸಂಸ್ಕೃತಿಗೆ ವಿರುದ್ಧವಾಗಿದೆ.

● ಪುಟ....ರಲ್ಲಿ (ನಂಬರ್ ಕೊಟ್ಟಿಲ್ಲ) ಪ್ರವಾದಿವರ್ಯರು(ಸ) ದೇವಮಾರ್ಗವನ್ನು ಕಲಿಸುವ ಗುರು ಮತ್ತು ಸೇನಾಧಿಪತಿಯಾಗಿದ್ದರು. ಈ ಎರಡು ವೈಶಿಷ್ಟ್ಯಗಳು ಪ್ರವಾದಿವರ್ಯರ(ಸ) ವ್ಯಕ್ತಿತ್ವದಲ್ಲಿ ಮಾತ್ರ ಕಂಡು ಬರುತ್ತವೆಂದು ಬರೆಯಲಾಗಿದೆ.

ಮಹಾಭಾರತವನ್ನು ನೀವು ಓದಿಲ್ಲವೇ? ಗೀತೋಪದೇಶ ಮಾಡಿದ ಕೃಷ್ಣನನ್ನು ಅರಿತಿಲ್ಲವೇ? ನೀವು ಕೃಷ್ಣನ ಚರಿತ್ರೆಯನ್ನು ಓದಿದರೆ, ಆತ ಹದಿನಾರು ಸೇನಾದಳಗಳ ನಾಯಕನಾಗಿದ್ದನೆಂದು ತಿಳಿಯುತ್ತದೆ.

● ಪುಟ 13ರಲ್ಲಿ, 'ವೇದಗಳು' ಋಷಿ ಮುನಿಗಳು ಮಾಡಿದ ದೇವಸ್ತುತಿ ಗೀತೆಗಳ ಸಂಗ್ರಹವೆಂದು ಬರೆಯಲಾಗಿದೆ.

ಒಟ್ಟು ನಾಲ್ಕು ವೇದಗಳಿವೆ. ಪ್ರತಿಯೊಂದು ವೇದವೂ ವಿಶಿಷ್ಟ ತತ್ವ ಚಿಂತನೆಗಳನ್ನು ಹೊಂದಿದೆ. ಮಾತ್ರವಲ್ಲದೇ ವೇದಗಳಲ್ಲಿ ಗಣಿತ, ವಿಜ್ಞಾನ, ಜೀವನದರ್ಶನ, ಅಖಿಲ ಚರಾಚರಗಳ ಸೃಷ್ಟಿಕ್ರಿಯೆ ಇತ್ಯಾದಿ ವೈವಿಧ್ಯಮಯ ವಿಷಯಗಳು ಪ್ರತಿಪಾದಿಸಲ್ಪಟ್ಟಿವೆ. ನೀವು ವೇದಾಧ್ಯಯನಕ್ಕೂ ಸ್ವಲ್ಪ ಸಮಯವನ್ನು ವಿನಿಯೋಗಿಸಬೇಕು.

● ಪುಟ 23ರಲ್ಲಿ "ಅಲ್ಲಾಹನು ಲೌಹಿಮ್‌ಮಹ್‌ಫೂಝ್(ಸುರಕ್ಷಿತ ಫಲಕ)ನಲ್ಲಿ ಇರಿಸಿರುವ ಆದರಣೀಯ ಗ್ರಂಥವೇ ಪವಿತ್ರ ಕುರ್‌ಆನ್" ಎಂದು ಹೇಳಲಾಗಿದೆ.

ದೇವನು ನಿರಾಕಾರನು. ಆತನಿಗೆ ಇಂದ್ರಿಯಗಳಿಲ್ಲವೆಂದು ಕುರ್‌ಆನ್ ಹೇಳುತ್ತದೆ. ಹೀಗಿರುತ್ತಾ, ಅಂತಹ ಒಂದು ಚೇತನವು ಕುರ್‌ಆನನ್ನು 'ಸುರಕ್ಷಿತ ಫಲಕ'ದಲ್ಲಿ ಹೇಗೆ ತಾನೇ ಇರಿಸಿತು? ಪ್ರವಾದಿವರ್ಯರ(ಸ) ಜನನಕ್ಕಿಂತ ಮುಂಚೆ ದೇವನು ಆ ಗ್ರಂಥವನ್ನು ಯಾಕೆ ಇಳಿಸಲಿಲ್ಲ? ವಸ್ತುತಃ ಮಾನವೇತಿಹಾಸವು ಪ್ರವಾದಿವರ್ಯರ(ಸ) ಜನನಕ್ಕಿಂತ ಕೋಟಿಗಟ್ಟಲೆ ವರ್ಷಗಳ ಮುಂಚೆಯೇ ಆರಂಭವಾಗಿತ್ತಲ್ಲವೇ?

✹ ಪುಟ 26ರಲ್ಲಿ "ಸುರಕ್ಷಿತ ಫಲಕದ ಆ ಗ್ರಂಥದಿಂದ ಆದರಣೀಯ ದೇವಚರ ಜಿಬ್ರೀಲ್‌ರು(ಅ) ಆಗಾಗ ಪ್ರವಾದಿ ಮುಹಮ್ಮದ್‌ರಿಗೆ(ಸ) ಅದನ್ನು ತಲಪಿಸಿದರು" ಎಂದಿದೆ.

ಹಾಗಾದರೆ ದೇವನು ಆ ಗ್ರಂಥವನ್ನು ಪ್ರವಾದಿವರ್ಯರಿಗೆ(ಸ) ನೇರವಾಗಿ ಯಾಕೆ ನೀಡಲಿಲ್ಲ? ಅದನ್ನು ಒಂದೇ ಬಾರಿ ಸಮಗ್ರವಾಗಿ ನೀಡದೆ ಸ್ವಲ್ಪ ಸ್ವಲ್ಪ ನೀಡಿದ್ದೇಕೆ? ಇಡೀ ಗ್ರಂಥವನ್ನು ಒಂದೇ ಸಲ ಇಳಿಸಬಹುದಾಗಿತ್ತಲ್ಲವೇ?

✹ ಪುಟ 26ರಲ್ಲಿ "ದೇವನಿಂದ ಅವತೀರ್ಣವಾದ ಕುರ್‌ಆನ್ ಗ್ರಂಥವನ್ನು ಮೊಟ್ಟಮೊದಲು ಓದಿದ ವ್ಯಕ್ತಿ ಉಮ್ಮಿ(ನಿರಕ್ಷರಿ)ಯಾಗಿದ್ದರು" ಎಂದಿದೆ.

ಓದು ಬರಹ ಬಾರದ ವ್ಯಕ್ತಿಯು ವಿಷಯಗಳನ್ನು ಗ್ರಹಿಸಬಹುದಾದರೂ ನಿರಕ್ಷರಿಯು ಹೇಗೆ ತಾನೇ ಓದಿಯಾನು?

✹ ಪುಟ 30ರಲ್ಲಿ "ವೇದವು ಸಂಸ್ಕೃತಕ್ಕಿಂತ ಮೊದಲಿನ ಯಾವುದೋ ಭಾಷೆಯಲ್ಲಿ ಬರೆಯಲ್ಪಟ್ಟದ್ದಾಗಿರಬಹುದು" ಎಂದಿದೆ.

ನನ್ನ ತಿಳುವಳಿಕೆಯ ಮಟ್ಟಿಗೆ ವೇದವು ಸಂಸ್ಕೃತ ಭಾಷೆಯಲ್ಲಿಯೇ ಬರೆಯಲ್ಪಟ್ಟಿದೆ. ಅದನ್ನು ಬರೆದ ಋಷಿವರೇಣ್ಯರು ಸಂಸ್ಕೃತ ಪಾರಂಗತರಾಗಿದ್ದರು. ಸಂಸ್ಕೃತ ಭಾಷೆಗಿಂತ ಮೊದಲು ಅನ್ಯ ಭಾಷೆಯಿದ್ದರೆ ಅದು ಯಾವುದೆಂದು ಹೇಳಬಲ್ಲಿರಾ?

✹ ಪುಟ 34ರಲ್ಲಿ "ಕೆಲವು ವರ್ಗದ ಜನರು ವೇದ ಪಾರಾಯಣ ಮಾಡುವುದೂ ಆಲಿಸುವುದೂ ಶಿಕ್ಷಾರ್ಹ ಅಪರಾಧವೆಂದು ಪರಿಗಣಿಸಲಾಗುತ್ತಿತ್ತು. ಅವರಿಗೆ ಆ ಶಿಕ್ಷೆ ವಿಧಿಸಲಾಗುತ್ತಿತ್ತೆಂದೂ ಚರಿತ್ರೆಯಿಂದ ತಿಳಿದು ಬರುತ್ತದೆ" ಎಂದೂ ಬರೆದಿದ್ದೀರಿ!

ನಿಮ್ಮ ಈ ನಿಲುಮೆ ಸರಿಯಾಗಿದೆ! ಧರ್ಮ ಮತ್ತು ವೇದವನ್ನು ಸ್ವಾರ್ಥ ಹಿತಾಸಕ್ತಿಗಳಿಗಾಗಿ ಬಳಸುವವರಿಗೆ ಆ ಶಿಕ್ಷೆ ನೀಡಲಾಗುತ್ತಿತ್ತು. ವೇದವು ಎಲ್ಲರೂ ಓದಲಿಕ್ಕಿರುವುದಲ್ಲವೆಂದು ವೇದದಲ್ಲಿ ಎಲ್ಲಿಯೂ ಹೇಳಿಲ್ಲ. ಸ್ವಾಮಿ ದಯಾನಂದರು ಬರೆದ 'ಸತ್ಯಾರ್ಥ ಪ್ರಕಾಶ'ವನ್ನು ನೋಡಿದರೆ ನಿಮಗೆ ಈ ವಾಸ್ತವಿಕತೆ ಮನವರಿಕೆಯಾಗಬಹುದು.

✹ ಪುಟ 52ರಲ್ಲಿ "ಪ್ರವಾದಿ ಮೂಸಾರಿಗೆ ಒಂದೇ ಕಂತಿನಲ್ಲಿ ಸಂಪೂರ್ಣ ತೌರಾತ್ ನೀಡಲ್ಪಟ್ಟಿತು. ಆದರೆ ಪವಿತ್ರ ಕುರ್‌ಆನ್ ಏಕಕಾಲದಲ್ಲಿ ಅವತೀರ್ಣವಾಗಲಿಲ್ಲ!" ಎಂದು ಹೇಳಿದ್ದೀರಿ.

ಕುರ್‌ಆನ್ ಗ್ರಂಥದಂತೆಯೇ ತೌರಾತ್ ಕೂಡಾ ದೇವನಿಂದ ಅವತೀರ್ಣಗೊಂಡ ವೇದ ಗ್ರಂಥವಲ್ಲವೇ? ಹೀಗಿರುತ್ತಾ, ಅವುಗಳ ಮಧ್ಯೆ ಈ ತಾರತಮ್ಯವೇಕೆ? ಎರಡು ಆಜ್ಞೆಗಳನ್ನು(ಕುರ್‌ಆನ್-ತೌರಾತ್) ಇಳಿಸುವ ಅಗತ್ಯವೇನು?

● ಪುಟ 49ರಲ್ಲಿ "ಇಸ್ಲಾಮ್ ಖಡ್ಗದಿಂದ ಹಬ್ಬಿತೆಂಬ ವಾದವು ಅಸಂಬದ್ಧ"ವೆಂದು ಹೇಳಿದ್ದೀರಿ. ಪುಟ 74ರಲ್ಲಿ "ಝಕಾತ್ ನೀಡಲು ನಿರಾಕರಿಸಿದವರ ವಿರುದ್ಧ ಪ್ರಥಮ ಖಲೀಫರು ಖಡ್ಗವೆತ್ತಿದ್ದರೆಂದೂ ಬರೆದಿದ್ದೀರಿ. ಪುನಃ ಅಲ್ಲಿಯೇ ಝಕಾತ್ ನೀಡದವರು ಮುಸ್ಲಿಮರಾಗಿದ್ದರೂ ಇಸ್ಲಾಮಿನ ಖಡ್ಗವು ಅವರತ್ತ ತಿರುಗುವುದು ಎಂದಿದ್ದೀರಿ?

ಇದರಲ್ಲಿ ಯಾವುದು ಸರಿ? "ಇಸ್ಲಾಮಿನ ಖಡ್ಗ" ಎಂದರೇನು? ಧರ್ಮವು ಮನಃ ಪೂರ್ವಕವಾಗಿ ಅಂಗೀಕರಿಸಬೇಕಾದ ವಿಶ್ವಾಸವಲ್ಲವೇ? ಇಲ್ಲಿ ಖಡ್ಗಕ್ಕೆ ಸ್ಥಾನವೆಲ್ಲಿದೆ?

● ಪುಟ 88ರಲ್ಲಿ "ಭಾರತೀಯ ಅರಸರು ಇತರ ರಾಷ್ಟ್ರಗಳಲ್ಲಿ ಸೇನಾಕ್ರಮಣ ನಡೆಸಿ ತಮ್ಮ ಧರ್ಮವನ್ನು ಹಬ್ಬಿಸಿದರು. ಜಾವಾ, ಸುಮಾತ್ರ, ಕೆಂಬೋಡಿಯಾ ಮುಂತಾದೆಡೆಗಳಲ್ಲಿ ಹಿಂದೂ ಧರ್ಮದ ಪ್ರಭಾವ ಇಂದಿಗೂ ಗೋಚರವಾಗುತ್ತಿದೆ. ಅಲ್ಲಿ ವಿಗ್ರಹಗಳಿವೆ"ಯೆಂದೂ ಬರೆದಿದ್ದೀರಿ.

ಜಾವಾ, ಸುಮಾತ್ರ, ಕೆಂಬೋಡಿಯಾ ಮಾತ್ರವಲ್ಲದೇ ಅರಬ್ ರಾಷ್ಟ್ರಗಳಲ್ಲಿಯೂ ವಿಗ್ರಹಗಳು ಕಂಡು ಬಂದಿವೆ. ಇದು ಹಿಂದೂ ಧರ್ಮವು ಭಾರತಕ್ಕೆ ಸೀಮಿತವಾಗಿಲ್ಲವೆನ್ನುವುದಕ್ಕೆ ಪುರಾವೆಯಾಗಿದೆ. ಆದರೆ ಭಾರತೀಯ ಅರಸರು ಇತರ ದೇಶಗಳಲ್ಲಿ ಸೇನಾಕ್ರಮಣ ನಡೆಸಿ ತಮ್ಮ ಧರ್ಮವನ್ನು ಪ್ರಚಾರಗೊಳಿಸಿದ ನಿದರ್ಶನವಿಲ್ಲ. ಅಂತಹ ಘಟನೆಗಳನ್ನು ನೀವು ಓದಿದ್ದರೆ ಆ ಅರಸರ ಚರಿತ್ರೆಯನ್ನು ಆಧಾರ ಸಹಿತ ತಿಳಿಸಿರಿ.

ಪ್ರಿಯ ಬಂಧು...! ಇಸ್ಲಾಮ್ ಧರ್ಮವನ್ನು ನಾನೂ ಪ್ರೀತಿಸುತ್ತೇನೆ. ಪವಿತ್ರ ಕುರ್‌ಆನನ್ನು ಸ್ವಂತ ಧರ್ಮಗ್ರಂಥದಂತೆಯೇ ಗೌರವಿಸುತ್ತೇನೆ. ನಾನು ಕುರ್‌ಆನನ್ನು ಪ್ರೀತಿಸುತ್ತೇನೆ. ಏಕೆಂದರೆ ಅದು ಇತರ ಧರ್ಮಗಳಂತೆಯೇ;

1. ಮಾನವನಿಗೆ ಉತ್ತಮ ಮಾನವನಾಗಲು ನೆರವಾಗುತ್ತದೆ.

2. ಸತ್ಕರ್ಮಗಳಿಗೆ ಪ್ರೇರೇಪಿಸುತ್ತದೆ.

3. ದೀನ ದಲಿತರು ಮತ್ತು ನಿರ್ಗತಿಕರಿಗೆ ನೆರವಾಗುವಂತೆ ಬೋಧಿಸುತ್ತದೆ.

4. ಝಕಾತ್ ನೀಡಲು ಆಜ್ಞಾಪಿಸುತ್ತದೆ.

5. ದೇವನು ಏಕನು, ಸರ್ವಶಕ್ತನು, ಕರುಣಾಮಯನು, ಆರಾಧನೆಗೆ ಅರ್ಹನು. ಆತನೋರ್ವನನ್ನು ಮಾತ್ರ ಆರಾಧಿಸಬೇಕು. ಇತರ ಯಾರನ್ನೂ ಯಾವ ವಸ್ತುವನ್ನೂ ಆರಾಧಿಸಬಾರದೆಂದು ಆದೇಶಿಸುತ್ತದೆ.

6. ಪ್ರೇಮ ಸಂದೇಶವನ್ನು ಪ್ರಚಾರ ಮಾಡುತ್ತದೆ. ಭ್ರಾತೃತ್ವವನ್ನು ಸ್ಥಾಪಿಸುತ್ತದೆ.

7. ಪರಹಿತಕ್ಕಾಗಿ ತ್ಯಾಗ ಮಾಡುವಂತೆ ಉತ್ತೇಜಿಸುತ್ತದೆ.

8. ತಮಗೆ ಪ್ರಿಯವಾದ ವಸ್ತುಗಳನ್ನೇ ದೇವಮಾರ್ಗದಲ್ಲಿ ಅರ್ಪಿಸುವಂತೆ ತಿಳಿಸುತ್ತದೆ.

9. ವಿಧಿ-ನಿಷೇಧಗಳನ್ನು ಪಾಲಿಸಿ ಬಾಳಲು ಕಲಿಸುತ್ತದೆ.

10. ಆರಾಧನೆಯ ಶ್ರೇಷ್ಠ ಹಾಗೂ ನೈಜ ವಿಧಾನವನ್ನು ತೋರಿಸುತ್ತದೆ.

11. ಇಸ್ಲಾಮ್ ಹೀಗೆ ಬೋಧಿಸುತ್ತದೆ: "ಹೇ ಮಾನವಾ! ದೇವನು ಪರಮ ದಯಾಳು. ನಿನ್ನ ದೋಷಗಳನ್ನು ಕ್ಷಮಿಸಿ ಪಾಪದಿಂದ ಮುಕ್ತಿಗೊಳಿಸುವಂತೆ ಆತನೊಡನೆ ಪ್ರಾರ್ಥಿಸು.

ಆತನು ಖಂಡಿತ ನಿನ್ನನ್ನು ಕ್ಷಮಿಸುತ್ತಾನೆ. ಆತನು ಸರ್ವಶಕ್ತನಾಗಿದ್ದಾನೆ."

12. ಇಸ್ಲಾಮ್ ಯಾರನ್ನೂ ಮೇಲು-ಕೀಳೆಂಬ ಪಕ್ಷಪಾತ ದೃಷ್ಟಿಯಿಂದ ನೋಡುವುದಿಲ್ಲ. ಅದು ಅನ್ಯಾಯವನ್ನು ದ್ವೇಷಿಸುತ್ತದೆ.

13. ನ್ಯಾಯ ಪಾಲಿಸಿ, ಕರ್ತವ್ಯ ನೆರವೇರಿಸಬೇಕೆಂದು ಕುರ್‌ಆನ್ ಸ್ಪಷ್ಟವಾಗಿ ಆದೇಶಿಸುತ್ತದೆ.

14. ಏಕೈಕನಾದ ಪ್ರಭುವನ್ನು ಪೂರ್ಣ ವಿಶ್ವಾಸದಿಂದ ಹಮ್ಮಿಕೊಳ್ಳಿರಿ. ಆತನ ಆಜ್ಞಾಪಾಲಕರಾಗಿರೆಂದು ಕುರ್‌ಆನ್ ಆಜ್ಞಾಪಿಸುತ್ತದೆ.

ಪವಿತ್ರ ಕುರ್‌ಆನ್ ಇಂತಹ ಉದಾತ್ತ ಸಂದೇಶಗಳ ಭಂಡಾರವಾಗಿದೆ. ವಾಚನ ಪುನರಾವರ್ತಿಸಿದಂತೆಯೇ ಅದರಿಂದ ಹೊಸ ಹೊಸ ವಿಚಾರಗಳು ಮೂಡಿ ಬರುತ್ತವೆ.

ಪ್ರಿಯ ಬಂಧು! ಮುಸ್ಲಿಮರ ಮಾತುಗಳನ್ನು ನಂಬಿ ನೀವು ವರ್ತಿಸುವುದಿಲ್ಲವಾದರೆ, ದೇವ ಮಾರ್ಗದಲ್ಲಿ ಇಸ್ಲಾಮನ್ನು ವಾಸ್ತವಿಕವಾಗಿ ಪ್ರೀತಿಸುವಿರಾದರೆ, ನಿಮಗೆ ಇಸ್ಲಾಮಿನ ನೈಜ ಸ್ವರೂಪವನ್ನು ಜನರಿಗೆ ತಿಳಿಸಬೇಕೆಂಬ ಆತ್ಮೀಯ ಕಳಕಳಿಯಿದ್ದರೆ, ನೀವು ಖಂಡಿತ ವಾಗಿಯೂ ಇಸ್ಲಾಮ್ ಧರ್ಮವನ್ನು ಪ್ರೀತಿಸಬಹುದು. ಆದರೆ ವಾಚಕರ ಮನನೋಯಿಸು ವಂತಹ ಮಾತುಗಳನ್ನು ಪ್ರಯೋಗಿಸಬೇಡಿರಿ.

"ನನ್ನ ಮನೆಯೇ ಇತರೆಲ್ಲರ ಮನೆಗಳಿಗಿಂತ ಶ್ರೇಷ್ಠ. ನನ್ನ ಧರ್ಮವೇ ಅನ್ಯ ಧರ್ಮಗಳಿಗಿಂತ ಉದಾತ್ತವೆಂದು ಓರ್ವನು ವಾದಿಸುತ್ತಿರುವನೆಂದಾದರೆ ಅದು ಇತರರ ಮನಸ್ಸನ್ನು ಖಂಡಿತ ಘಾಸಿಗೊಳಿಸುತ್ತದೆ. ಅವರ ಮನದಲ್ಲಿ ಉರಿ ಮತ್ತು ನೋವುಂಟಾಗುತ್ತದೆ. ಅದು ಮಾನವ ಸಹಜ ಗುಣ. ತಾನು 'ತುಚ್ಛನೆಂದು' ಕರೆಯಿಸುವುದನ್ನು ಯಾರೂ ಮೆಚ್ಚುವುದಿಲ್ಲ. ಇತರರನ್ನು ನಿಂದಿಸಿ ಉನ್ನತಿಗೇರಲು ನಮಗೆ ಸರ್ವಥಾ ಸಾಧ್ಯವಿಲ್ಲ."

ನೀವು ಓರ್ವ ಸಂಪಾದಕರು, ಲೇಖನಿಯ ಬಲವನ್ನು ಬಲ್ಲ ವಿದ್ವಾಂಸರು. ನೀವು ಇಸ್ಲಾಮ್ ಧರ್ಮಕ್ಕೆ ಮಹತ್ತರ ಸೇವೆ ಸಲ್ಲಿಸಬಹುದು. ಆದರೆ, ಇಸ್ಲಾಮಿನ ಸೇವೆಗಾಗಿ ಇತರ ಧರ್ಮಗಳ ಹುಳುಕನ್ನು ಕೆದಕಿ ನೋಡಬೇಕಾಗಿಲ್ಲ. ಇಸ್ಲಾಮಿನ ಮಹಾತ್ಮೆಯನ್ನು ಗುರುತಿಸಿ ಜನರಿಗೆ ತಿಳಿಯಪಡಿಸಿರಿ. ನನ್ನ ಈ ವಿನಂತಿಯನ್ನು ಅಪಾರ್ಥ ಮಾಡಲಾರಿರೆಂದು ಭಾವಿಸುತ್ತೇನೆ. ಈ ಪತ್ರದಲ್ಲಿ ಏನಾದರೂ ತಪ್ಪಿದ್ದರೆ ಕ್ಷಮಿಸಿ. ಈ ಕೆಳಗಿನ ವಿಳಾಸಕ್ಕೆ ಉತ್ತರ ಬರೆಯಬೇಕೆಂದು ಬಿನ್ನವಿಸುತ್ತೇನೆ. ನಿಮ್ಮ ಪತ್ರವು ನನ್ನ ತಪ್ಪು ತಿಳುವಳಿಕೆಯನ್ನು ನಿವಾರಿಸಬಹುದು.

-ನಿಮ್ಮ ಪ್ರೀತಿಯ ಸಹೋದರ

ಓ.ಪಿ. ಗುಪ್ತಾ

ಬಿ-2-ಬಿ-75, ಜನಕ್‌ಪುರಿ,

ನವದೆಹಲಿ - 110 058

---

# ಸವಿನಯ ಉತ್ತರ

ಸನ್ಮಾನ್ಯ ಗುಪ್ತಾರಿಗೆ,

ಶುಭಾಶಯಗಳು!

ನಿಮ್ಮ ಪತ್ರ ತಲಪಿತು. ನಾನು ತಮಿಳಿನಲ್ಲಿ ಬರೆದ 'ನಾನ್ ಕಾದಲಿಕ್ಕುಮ್ ಇಸ್ಲಾಮ್' ಹಿಂದಿ ಭಾಷೆಗೆ ಅನುವಾದವಾಗಿದೆಯೆಂದು ಮಾತ್ರ ತಿಳಿದಿದ್ದೆ. ಆದರೆ ಆ ಪುಸ್ತಕವು ಹಿಂದೀ ಬಲ್ಲ ನಿಮ್ಮಂಥವರ ಚಿಂತನೆಯನ್ನು ಬಡಿದೆಬ್ಬಿಸಿದೆಯೆಂದು ನಿಮ್ಮ ಪತ್ರದಿಂದಲಷ್ಟೇ ತಿಳಿಯಿತು. ಪುಸ್ತಕ ಓದಿದಾಗ ನಿಮ್ಮ ಮನಸ್ಸಿನಲ್ಲಿ ಕೆಲವು ಪ್ರಶ್ನೆಗಳು ಮೂಡಿತೆಂದು ತಿಳಿಸಿದ್ದೀರಿ. ಅದರ ಉತ್ತರವನ್ನು ನಿರೀಕ್ಷಿಸುವುದಾಗಿಯೂ ಬರೆದಿದ್ದೀರಿ.

ನನಗೆ ಎಲ್ಲವೂ ತಿಳಿದಿದೆಯೆಂಬ ಹಮ್ಮಿನಿಂದ ನಿಮಗೆ ಉತ್ತರಿಸ ಹೊರಟಿಲ್ಲ. ದೇವನು ಉತ್ತರಿಸುವ ಚೈತನ್ಯ ನೀಡುವನೆಂಬ ಭರವಸೆಯಿಂದ ಪತ್ರವನ್ನು ಆರಂಭಿಸುತ್ತೇನೆ.

## ಜ್ಞಾನ ಭಂಡಾರ

'ನಾನ್ ಕಾದಲಿಕ್ಕುಮ್ ಇಸ್ಲಾಮ್' ಅದರ ಏಳನೇ ಪುಟದ ಒಂದು ವಾಕ್ಯವನ್ನು ಉದ್ಧರಿಸಿ ನೀವು ಹೀಗೆ ಪ್ರಶ್ನಿಸಿದ್ದೀರಿ: "ವೇದದ ಅರ್ಥ ಕಣ್ಣಿನಿಂದ ಮರೆಸುವುದು" ಎಂದು ಆ ವಾಕ್ಯದಲ್ಲಿ ಹೇಳಿದೆ. ಅದು 'ಜ್ಞಾನದ ಭಂಡಾರ'ವೆಂದೂ ಹೇಳಲಾಗಿದೆ. ಇವೆರಡು ಪರಸ್ಪರ ಸರಿಹೊಂದುವುದಾದರೂ ಹೇಗೆ?

ತಮಿಳಿನಲ್ಲಿ ವೇದಕ್ಕೆ 'ಮರೈ' ಎಂಬ ಹೆಸರಿದೆ. ಮರೈ ಎಂದರೆ ಪ್ರತ್ಯಕ್ಷವಾಗಿ ಕಾಣುವ ವಸ್ತುವಿನೊಳಗೆ ಪರೋಕ್ಷವಾದ ಇನ್ನೊಂದು ಸಾರವನ್ನು (ಅರ್ಥವನ್ನು) ಸೇರಿಸುವುದು ಎಂದರ್ಥ. ಪ್ರತಿಬಾರಿ ಓದಿದಾಗಲೂ ಹೊಸ ವಿಚಾರಗಳನ್ನು ಗುರುತಿಸಲಾಗುವುದೇ ಉತ್ತಮ ವೇದ ಗ್ರಂಥಗಳ ವೈಶಿಷ್ಟ್ಯ. ತಳಭಾಗದಲ್ಲಿ ಹವಳಗಳಿರುವ ಸಮುದ್ರಕ್ಕೆ ಇದನ್ನು ಹೋಲಿಸಬಹುದು. ಹವಳಗಳನ್ನು ಹೆಕ್ಕುವವನು ಮುಳುಗಿ, ಪ್ರತಿಬಾರಿ ಮೇಲೆ ಬರುವಾಗಲೂ ಆತನ ಮುಷ್ಟಿಯಲ್ಲಿ ವಿವಿಧ ರೀತಿಯ ಹವಳಗಳಿರುತ್ತವೆ. ಆದರೆ ದಡದಲ್ಲಿ ನಿಂತು ನೋಡುವವರಿಗೆ ಸಮುದ್ರ ಪಾತಳಿಯಲ್ಲಿರುವ ಆ ಹವಳಗಳು ಗೋಚರಿಸಲಾರವು.

ಹವಳಗಳು ಎಂದಾದರೊಂದು ದಿನ ಬರಿದಾಗಬಹುದು. ಆದರೆ, ದೈವಿಕ ಗ್ರಂಥವು ಅಪಾರ ಹವಳಗಳು ಹರಡಿರುವ ಮಹಾ ಸಾಗರವಾಗಿದೆ.

'ಕಣ್ಣಿನಿಂದ ಮರೆಸುವುದು' ಮತ್ತು 'ಜ್ಞಾನ ಭಂಡಾರ' ಈ ಎರಡು ಅರ್ಥಗಳು ಹೇಗೆ ತಾಳೆಯಾಗುವುದೆಂದು ಪ್ರಶ್ನಿಸಿದ್ದೀರಿ. ಸಾರ್ವಜನಿಕ ಭಂಡಾರ ಅಥವಾ ಖಜಾನೆಗಳನ್ನು ಸುಭದ್ರವಾಗಿ ಮುಚ್ಚಿಡಲಾಗುತ್ತದೆ. ಪೆಟ್ಟಿಗೆ, ಬೀಗ, ನೆಲಮಾಳಿಗೆ ಇತ್ಯಾದಿಗಳು ಭಂಡಾರಗಳನ್ನು

ಕಣ್ಣಿಗೆ ಕಾಣಿಸದಂತೆ ಬಚ್ಚಿಡುತ್ತವೆ. ಅದ್ದರಿಂದ ಕಣ್ಣಿನಿಂದ ಅಥವಾ ದೃಷ್ಟಿಯಿಂದ ಮರೆಸುವುದು ಮತ್ತು ಜ್ಞಾನದ ಭಂಡಾರ ಇವೆರಡರಲ್ಲಿಯೂ ವಿರೋಧಾಭಾಸವಿಲ್ಲ.

## ಪ್ರೇಮ ಮತ್ತು ಜಿಹಾದ್

ಪ್ರವಾದಿವರ್ಯರಂತೆ(ಸ) ಇತರ ಯಾರೂ ಕಠಿಣ ವಿರೋಧಗಳನ್ನು ಅನುಭವಿಸಿಲ್ಲ. ನನ್ನ ಈ ಅಭಿಪ್ರಾಯದೊಂದಿಗೆ ಸಹಮತವಿಲ್ಲವೆಂಬ ನಿಮ್ಮ ವಿಮರ್ಶೆಯಿಂದ ನನಗೆ ಅಶ್ಚಾಶ್ಚರ್ಯವಾಗಿದೆ. "ಪ್ರವಾದಿವರ್ಯರು ಕಠಿಣ ವಿರೋಧವನ್ನು ಯಾಕೆ ಎದುರಿಸ ಬೇಕಾಯಿತು? ಅದರ ಕಾರಣ ಹೀಗಿದೆ: ಇತರ ಧರ್ಮಪ್ರಚಾರಕರು, ತಮ್ಮ ಸಂದೇಶಗಳನ್ನು ಪ್ರೇಮದಿಂದ ಪ್ರಚಾರ ಮಾಡಿದರು. ಆದರೆ ಪ್ರವಾದಿವರ್ಯರು(ಸ) ತಮ್ಮ ತತ್ವ ಚಿಂತನೆಯನ್ನು ಅನ್ಯರ ಮೇಲೆ ಹೇರಲೆತ್ನಿಸಿದರು" ಎಂದು ನೀವು ಬರೆದಿದ್ದೀರಿ.

ನಿಮಗೆ ಪ್ರವಾದಿವರ್ಯರ(ಸ) ಜೀವನ ಚರಿತ್ರೆಯನ್ನು ಸಮಗ್ರವಾಗಿ ಕಲಿಯುವ ಅವಕಾಶ ದೊರೆತಿಲ್ಲದಿರುವುದೇ ನಿಮ್ಮ ಈ ತಪ್ಪು ತಿಳುವಳಿಕೆಗೆ ಕಾರಣವೆಂದು ಭಾವಿಸುತ್ತೇನೆ.

ಪ್ರವಾದಿವರ್ಯರ(ಸ) ಜೀವನವನ್ನು ಎರಡು ಹಂತಗಳಾಗಿ ವಿಂಗಡಿಸಬಹುದು. ಪ್ರವಾದಿವರ್ಯರು(ಸ) ಮಕ್ಕಾದಲ್ಲಿ ಪ್ರೀತಿಯಿಂದ ಸಂದೇಶ ಪ್ರಚಾರ ಮಾಡಿದ ಪ್ರಥಮ ಹಂತ. ಮಕ್ಕಾ ತೊರೆದು ಮದೀನಾಕ್ಕೆ ತಲಪಿದಾಗ ಎದುರಾದ 'ಪ್ರತಿಭಟನಾ ಹೋರಾಟ'ದ ದ್ವಿತೀಯ ಹಂತ. ಈ ಎರಡು ಹಂತಗಳ ಪೈಕಿ, ಪ್ರವಾದಿವರ್ಯರು(ಸ) ಮಕ್ಕಾ ಹಂತದಲ್ಲಿ ಅತ್ಯಧಿಕ ವಿರೋಧಕ್ಕೆ ಗುರಿಯಾಗಿದ್ದರು. ಆ ಹಂತದಲ್ಲಿ ಅವರು ಎಷ್ಟೊಂದು ಕರುಣೆ ಸಂಯಮಗಳಿಂದ ಇಸ್ಲಾಮನ್ನು ಬೋಧಿಸಿದ್ದರೆಂಬುದನ್ನು ದೃಢಪಡಿಸುವ ಕೆಲವು ಉದಾಹರಣೆ ಗಳನ್ನು ನೋಡಿ;

ಅವರು ಮೊತ್ತಮೊದಲು ತಮ್ಮ ಸಂಬಂಧಿಕರಿಗೆ ಔತಣಕೂಟವನ್ನು ಏರ್ಪಡಿಸಿದರು. ಔತಣದ ಕೊನೆಯಲ್ಲಿ ಅವರಿಗೆ ಇಸ್ಲಾಮಿನ ಸಂದೇಶವನ್ನು ತಿಳಿಸಿದರು. ಆಗ ಅವರ ಸಂಬಂಧಿಕರು; ಇದಕ್ಕಾಗಿ ನೀವು ನಮ್ಮನ್ನು ಆಮಂತ್ರಿಸಿದಿರಾ ಎಂದು ನಿಂದಿಸುತ್ತಾರೆ. ಇದು ಹೇರಿಕೆಯೇ?

ಪ್ರವಾದಿವರ್ಯರು(ಸ) ಮಕ್ಕಾ ನಗರಕ್ಕೆ ಬರುವ ಹೊರನಾಡ ಯಾತ್ರಿಕರನ್ನು ಭೇಟಿಯಾಗಿ ಅವರಿಗೆ ಇಸ್ಲಾಮಿನ ಸಂದೇಶವನ್ನು ಹೃದಯಸ್ಪರ್ಶಿಯಾಗಿ ವಿವರಿಸುತ್ತಾರೆ. ಮಾಟಗಾರ ಮುಹಮ್ಮದ್‌ರ(ಸ) ಸಮ್ಮೋಹಕ ಮಾತುಗಳನ್ನು ಆಲಿಸಬಾರದೆಂದು ವೈರಿಗಳು ಕುಪ್ರಚಾರ ನಡೆಸುತ್ತಾರೆ. ಅದನ್ನು ನಂಬಿದ 'ತುಫೈಲ್' ಎಂಬೋರ್ವರು ಮಕ್ಕಾ ನಗರಕ್ಕೆ ಬರುವಾಗ ಕಿವಿಯೊಳಗೆ ಹತ್ತಿ ತುರುಕುತ್ತಾರೆ. ಹಾಗಿದ್ದರೂ ಏನಾಯಿತು? ಪವಿತ್ರ ಗ್ರಂಥದ ಸುಮಧುರ ವಚನಗಳು ಅವರ ಹತ್ತಿ ತುರುಕಿದ ಕಿವಿಯೊಳಕ್ಕೂ ನುಸುಳಿತು. ಸನ್ಮಾರ್ಗದ ಮಹಿಮೆ ಪ್ರತ್ಯಕ್ಷವಾಯಿತು. ತುಫೈಲ್‌ರು ಸತ್ಯ ವಚನವನ್ನು ಘೋಷಿಸಿ ಇಸ್ಲಾಮ್ ಸ್ವೀಕರಿಸಿದರೆಂದು ಇತಿಹಾಸವು ಹೇಳುತ್ತದೆ. ಇದು ಹೇರಿಕೆಯೇ? ಇದು ಯುದ್ಧವೇ?

ಇನ್ನೊಂದು ಘಟನೆ ಹೀಗಿದೆ: ಮಕ್ಕಾ ಸಮೀಪದ ತಾಯಿಫ್‌ಗೆ ಪ್ರವಾದಿವರ್ಯರು(ಸ) ದಿವ್ಯ ಪ್ರಕಾಶವನ್ನು ಒಯ್ದರು. ನೀನು ದೇವ ಪ್ರವಾದಿಯೋ? ದೇವ ಪ್ರವಾದಿಯಾಗಿರುತ್ತಾ

ಪಯಣಿಸಲು ಒಂದು ಕತ್ತೆಯೂ ಸಿಗಲಿಲ್ಲವೇ ಎಂದು ಅಲ್ಲಿನ ಗಣ್ಯರು ಗೇಲಿ ಮಾಡಿದರು. ಮಾತ್ರವಲ್ಲ ಪುಂಡ ಪೋಕರಿಗಳನ್ನು ಛೂ ಬಿಡುತ್ತಾರೆ. ಅವರು ಕಲ್ಲೆಸೆಯುತ್ತಾರೆ. ಪ್ರವಾದಿವರ್ಯರ(ಸ) ದೇಹವು ಘಾಸಿಗೊಂಡು ರಕ್ತ ಧಾರಾಕಾರವಾಗಿ ಸುರಿಯುತ್ತದೆ. ಹಾಗಿದ್ದರೂ ಆ ಕಠೋರ ಹೃದಯಿಗಳು ಮರ್ದನ ನಿಲ್ಲಿಸಲಿಲ್ಲ. ಈ ದಯನೀಯ ಸ್ಥಿತಿಯನ್ನು ನೋಡಿದ ಪ್ರವಾದಿವರ್ಯರ(ಸ) ದತ್ತು ಪುತ್ರ ದುಃಖದಿಂದ ಹೀಗೆ ವಿನಂತಿಸುತ್ತಾರೆ: "ಪ್ರವಾದಿಗಳೇ! ಈ ದುಷ್ಟರ ನಗರಕ್ಕೆ ಹಿಡಿಶಾಪ ಹಾಕಿರಿ!" ರಕ್ತದಲ್ಲಿ ಮಿಂದ ಆ ದಾರುಣ ಸ್ಥಿತಿಯಲ್ಲಿಯೂ ಕರುಣೆಯೇ ಮೈವೆತ್ತ ಆ ಪ್ರವಾದಿ ಹೇಳಿದ್ದೇನು? ನಾನು ಶಾಪ ಕೊಡಲಿಕ್ಕಾಗಿ ಬಂದಿಲ್ಲ. ಇಂದು ಈ ನಗರವಾಸಿಗಳು ದೇವ ಸಂದೇಶವನ್ನು ನಿರಾಕರಿಸಿ ನಮ್ಮನ್ನು ಹಿಂಸಿಸಬಹುದು. ಅಂದ ಮಾತ್ರಕ್ಕೆ ಭವಿಷ್ಯದಲ್ಲಿ ಇವರು ಮತ್ತು ಇವರ ಪೀಳಿಗೆ ಸನ್ಮಾರ್ಗ ಸ್ವೀಕರಿಸಲಾರರೆನ್ನುವಂತಿಲ್ಲ.

ಪ್ರಿಯ ಗುಪ್ತಾ! ಈ ಐತಿಹಾಸಿಕ ಘಟನೆಗಳನ್ನು ನೀವು ಓದಿಲ್ಲವೇ? ಅದರಲ್ಲಿ ಬಲಾತ್ಕಾರ ಎಲ್ಲಿದೆ? ಯುದ್ಧ ಎಲ್ಲಿದೆ?

ಇಸ್ಲಾಮ್ ಧರ್ಮವು ಮಕ್ಕಾದಲ್ಲಿ ಪ್ರಚಾರಗೊಂಡಾಗ ಅದನ್ನು ಅಂಗೀಕರಿಸಿದವರಲ್ಲಿ ಬಹುಮಂದಿ ಬಡವರೋ-ಗುಲಾಮರೋ-ಕಾರ್ಮಿಕರೋ ಆಗಿದ್ದರು. ಅವರ ಧನಿಗಳು ಆ ಬಡಪಾಯಿಗಳನ್ನು ಚೆನ್ನಾಗಿ ಥಳಿಸಿದರು. ಹಿಂಸಿಸಿದರು. ಕಣ್ಣುಗಳನ್ನು ಕುಕ್ಕಿದರು. ಬಿಸಿ ಮರಳಲ್ಲಿ ಮಲಗಿಸಿ ಎದೆಯ ಮೇಲೆ ಕಲ್ಲು ಹೇರಿದರು. ಅವರ ಎರಡೂ ಕಾಲುಗಳನ್ನು ಎರಡು ಒಂಟೆಗಳಿಗೆ ಕಟ್ಟಿ ಅವುಗಳನ್ನು ವಿರುದ್ಧ ದಿಕ್ಕಿಗೆ ಓಡಿಸಿ ದೇಹವನ್ನು ಸೀಳಿದರು. ಅನುಯಾಯಿಗಳು ಇಂತಹ ಕ್ರೂರ ಹಿಂಸೆಗೆ ಗುರಿಯಾಗುತ್ತಿದ್ದಾಗಲೂ ಪ್ರವಾದಿ(ಸ) ತಾಳ್ಮೆ ವಹಿಸಿದರು. ಪ್ರಥಮ ಹಂತದಲ್ಲಿ ಬಹಿಷ್ಕಾರ, ನಿಂದನೆ, ಭರ್ತ್ಸನೆಗಳ ಮಹಾಪೂರವೇ ಹರಿದಿತ್ತು. ತರುವಾಯ ಪ್ರವಾದಿವರ್ಯರು(ಸ) ನಡೆದಾಡುವ ದಾರಿಯಲ್ಲಿ ಮುಳ್ಳು ಹರಡಿದರು. ಪ್ರವಾದಿವರ್ಯರು(ಸ) ನಮಾಝ್ ಮಾಡುವಾಗ ಅವರ ಕೊರಳಿಗೆ ಒಂಟೆಯ ಕೊಳೆತ ಕರುಳನ್ನು ಹಾಕಿದರು. ಹೀಗೆ ಏನೇನೋ ಮಾಡಿದ್ದರು.

ಪ್ರಿಯ ಗುಪ್ತಾ! ಈ ಹಿಂಸೆ ದೌರ್ಜನ್ಯಗಳು ಕೇವಲ ಒಂದೆರಡು ವರ್ಷಗಳಿಗೆ ಸೀಮಿತವಾಗಿರಲಿಲ್ಲ. 13 ವರ್ಷಗಳ ಸುದೀರ್ಘ ಕಾಲ ಹಿಂಸೆ ಮರ್ದನಗಳನ್ನು ಸಹಿಸಿ ಧರ್ಮಪ್ರಚಾರ ನಿರ್ವಹಿಸಿದ ಕರುಣಾಳು ಪ್ರವಾದಿವರ್ಯರು(ಸ), ಪ್ರೇಮದಿಂದ ಸಂದೇಶ ಪ್ರಚಾರ ಮಾಡಿಲ್ಲವೆಂದು ಆರೋಪಿಸುವುದೇ?

ಇನ್ನಷ್ಟು ಸ್ಪಷ್ಟವಾಗಿ ಹೇಳುವುದಿದ್ದರೆ, ಪ್ರವಾದಿವರ್ಯರು(ಸ) ಮಕ್ಕಾದಲ್ಲಿ ಇಸ್ಲಾಮೀ ಸಂದೇಶ ಪ್ರಚಾರ ನಡೆಸುತ್ತಿದ್ದಾಗಲೇ ಕಠಿಣ ಪರೀಕ್ಷೆಗಳನ್ನು ಎದುರಿಸಿದ್ದರು. ಮದೀನಾ ತಲಪಿದ ಬಳಿಕ ಅಂತಹ ಕಂಟಕಗಳಿರಲಿಲ್ಲ. ಮದೀನಾದಲ್ಲಿ ಹೊಸ ರೀತಿಯ ವಿರೋಧ ವ್ಯಕ್ತವಾಯಿತು. ಮದೀನಾದಲ್ಲಿ ಮುಸ್ಲಿಮರು ಸಾಂಘಿಕವಾಗಿ ಸ್ಥಾಪಿಸಿದ ಇಸ್ಲಾಮೀ ರಾಷ್ಟ್ರವನ್ನು ವೈರಿ ಸೇನೆಯು ಆಕ್ರಮಣಕ್ಕೆ ಹವಣಿಸುತ್ತಿರುವಾಗ ಪ್ರತಿಹೋರಾಟ ನಡೆಸುವ ಹೊರತು ಅನ್ಯ ಮಾರ್ಗವಿದೆಯೇ? ಈ ವಸ್ತುಸ್ಥಿತಿಯನ್ನು ಅರಿತಿದ್ದರೆ, ನಿಮ್ಮಲ್ಲಿ ಈ ತಪ್ಪು ತಿಳುವಳಿಕೆ

ಹುಟ್ಟುತ್ತಿರಲಿಲ್ಲ. ಹಾಗೆಯೇ ಇನ್ನೊಂದು ವಿಷಯವೂ ಗಮನಾರ್ಹವಾಗಿದೆ. "ಧರ್ಮದಲ್ಲಿ ಬಲಾತ್ಕಾರವಿಲ್ಲ"ವೆಂದು ಇಸ್ಲಾಮ್ ಸ್ಪಷ್ಟವಾಗಿ ಸಾರಿದೆ. ಬಲಾತ್ಕಾರವಿಲ್ಲದಿರುವಾಗ ಹೇರಿಕೆ ಎಲ್ಲಿಂದ ಬಂತು? ಇಸ್ಲಾಮ್ ಒಂದು ಹೊಸ ಧರ್ಮವಾಗಿರುತ್ತಿದ್ದರೆ, 'ಹೇರಿಕೆ' ಸಂಭಾವ್ಯವೆಂದು ತರ್ಕಕ್ಕಾಗಿ ಒಪ್ಪಬಹುದಿತ್ತು. ಆದರೆ, ಇಸ್ಲಾಮ್ ಕೇವಲ ಏಕದೇವನಿಗೆ ಶರಣಾಗುವ ಪ್ರಾಚೀನ ಧರ್ಮವಾಗಿದೆ. ಬಹುದೇವಾರಾಧನೆ ಮತ್ತು ವಿಗ್ರಹ ಪೂಜೆಯು ಕ್ರಮೇಣ ಹುಟ್ಟಿಕೊಂಡಿತು. ಮಧ್ಯದಲ್ಲಿ ಸೇರಿದ ಈ ಸಂಪ್ರದಾಯವನ್ನು ನೀಗಿಸಿ, ಪ್ರವಾದಿವರ್ಯರು(ಸ) ಹಳೆಧರ್ಮವನ್ನು ಸ್ಥಾಪಿಸುವ ಕೆಲಸ ಮಾಡಿದರು. ಇದನ್ನು ಹೀಗೂ ಹೇಳಬಹುದು- ಅಲ್ಲಾಹನು, ಅರಬರಿಗೆ ಕೇವಲ ಪ್ರವಾದಿವರ್ಯರ(ಸ) ಮೂಲಕ ಪರಿಚಿತಗೊಂಡ ದೇವನಲ್ಲ. ಅಲ್ಲಾಹನನ್ನು ಆರಾಧಿಸುವ ಸಂಪ್ರದಾಯವು ಪ್ರವಾದಿವರ್ಯರಿಗಿಂತ(ಸ) ಮುಂಚೆಯೇ ಅಸ್ತಿತ್ವದಲ್ಲಿತ್ತು. (ಪ್ರವಾದಿವರ್ಯರ(ಸ) ತಂದೆಯ ಹೆಸರೇ ಅಬ್ದುಲ್ಲಾ[ಅಲ್ಲಾಹನ ದಾಸ] ಎಂದಲ್ಲವೇ?) ಆದರೆ ತನ್ಮಧ್ಯೆ ಕೇವಲ ಅಲ್ಲಾಹನನ್ನು ಆರಾಧಿಸುವ ಬದಲಾಗಿ ಲಾತ, ಮನಾತ, ಉಝ್ಝಾ ಮುಂತಾದ ಅನೇಕ ಕಲ್ಪಿತ ಸ್ತ್ರೀ ದೇವತೆಯರ ಆರಾಧನೆ ಆರಂಭವಾಯಿತು. 'ಹುಬಲ್' ಎಂಬ ಸಿಂಗರಿಸಿದ ಕರಿಶಿಲೆಯ ದೇವನನ್ನು ಮಹಾ ಶಕ್ತಿಯೆಂದು ನಂಬಲಾಯಿತು.

ಪ್ರತಿಯೊಂದು ಕುಲಕ್ಕೂ ಒಬ್ಬ ದೇವ. ಸೂರ್ಯ, ಗ್ರಹಗಳು, ಕುದುರೆ, ಗರುಡ ಇತ್ಯಾದಿಗಳೆಲ್ಲವೂ ಆರಾಧ್ಯ ವಸ್ತುಗಳಾಗಿದ್ದುವು. ಅವು ಯಾವುದೂ ದೇವರಲ್ಲ. ಕೇವಲ ಏಕೇಶ್ವರ(ಅಲ್ಲಾಹ್)ನೇ ದೇವನೆಂಬ ಸತ್ಯವನ್ನು ಪ್ರವಾದಿ(ಸ) ಸಾರಿದರು. ದೇವಾದೇಶದ ಹಿನ್ನೆಲೆಯಲ್ಲಿಯೇ ಹಾಗೆ ಘೋಷಿಸಲಾಯಿತು. ಆದ್ದರಿಂದ 'ಹೇರಿಕೆ' ಎಂಬ ಆರೋಪ ಅರ್ಥಹೀನ. ಮಧ್ಯಕಾಲದಲ್ಲಿ ಸೇರಿಕೊಂಡದ್ದನ್ನು ನೀಗಿಸಿದರೆಂಬುದೇ ಸರಿಯಾದ ಪ್ರಯೋಗ.

ಇದು ಕೇವಲ ಅರಬ್ ದೇಶದ ವಿಷಯವಲ್ಲ. ಜಗತ್ತಿನ ಆದಿಯಲ್ಲಿ ಏಕ ದೇವಾರಾಧನೆಯೇ ಅಸ್ತಿತ್ವದಲ್ಲಿತ್ತು. ಬಹುದೇವಾರಾಧನೆ, ವಿಗ್ರಹಪೂಜೆಗಳು ಆಮೇಲೆ ಹುಟ್ಟಿಕೊಂಡುವು. ಅಂತಹ ಆರಾಧನಾ ಕ್ರಮಗಳನ್ನು ತೊರೆದು ಕೇವಲ ಏಕದೇವೋಪಾಸನೆ ಮಾಡಬೇಕೆಂದು ಇಸ್ಲಾಮ್ ನಿರ್ದೇಶಿಸಿತು. ಈ ಮೂಲತತ್ವವನ್ನು ನೀವು ಮನಗಂಡು, ಇಸ್ಲಾಮ್ 'ಜಿಹಾದ್'ನಿಂದ ಹೇರಲ್ಪಟ್ಟಿದೆಯೆಂಬ ವಾದವನ್ನು ತಿದ್ದಿಕೊಳ್ಳುವಿರೆಂದು ನಂಬುತ್ತೇನೆ. ಇನ್ನೂ ಸಂದೇಹವಿದ್ದರೆ, ಗಾಂಧೀಜಿಯವರಂತಹ ಅನೇಕ ನಾಯಕರು ಉಲ್ಲೇಖಿಸಿರುವ ಮಾತುಗಳನ್ನು ನೀವು ಓದಿ ನೋಡಬೇಕು. ಆ ಮುತ್ಸದ್ದಿಗಳೆಲ್ಲರೂ "ಇಸ್ಲಾಮ್ ಖಡ್ಗದಿಂದ ವ್ಯಾಪಿಸಿತು" ಎಂಬ ಕುಪ್ರಚಾರವನ್ನು ತೀವ್ರವಾಗಿ ಖಂಡಿಸಿದ್ದಾರೆ.

## ಮೂರ್ತಿ ಭಂಜಕ

13ನೇ ಪುಟದಲ್ಲಿರುವ, "ಆರಾಧನೆಗೆ ಚಿತ್ರ, ಶಿಲೆ, ವಿಗ್ರಹ ಮುಂತಾದವುಗಳ ಅಗತ್ಯವಿಲ್ಲ. ಜಗತ್ತಿನಲ್ಲಿ ಪ್ರವಾದಿಯವರಂತೆ(ಸ) ಈ ತತ್ವವನ್ನು ಯಾವ ಕ್ರಾಂತಿಕಾರಿಯೂ ಪ್ರಚಾರಪಡಿಸಿಲ್ಲ" ಎಂಬ ಭಾಗವನ್ನು ನೀವು ಪ್ರಶ್ನಿಸಿದ್ದೀರಿ. ಆರ್ಯ ಸಮಾಜದ ನಾಯಕ ದಯಾನಂದರು ಈ ತತ್ವವನ್ನು ಪ್ರತಿಪಾದಿಸಿದ್ದರೂ ದೇವ ಮಂದಿರಗಳಿಂದ ವಿಗ್ರಹಗಳನ್ನು

ನೀಗಿಸಿಲ್ಲವೆಂದೂ ನೀವು ಬರೆದಿದ್ದೀರಿ. ಇದರಲ್ಲಿ ಪ್ರಶ್ನೆ ಯಾವುದೆಂದು ನನಗೆ ಅರ್ಥವಾಗುವುದಿಲ್ಲ. ವಿಗ್ರಹ ಮತ್ತು ಚಿತ್ರಗಳ ಅಗತ್ಯವಿಲ್ಲವೆಂದ ಸ್ವಾಮಿ ದಯಾನಂದರು, ಅವುಗಳನ್ನು ಯಾಕೆ ನೀಗಿಸಿಲ್ಲವೆಂದು ನನ್ನನ್ನು ಪ್ರಶ್ನಿಸಿದರೆ ನಾನು ಏನೆನ್ನಲಿ?

ಪ್ರವಾದಿವರ್ಯರು(ಸ) ಕಅಬಾ ಭವನದಿಂದ ವಿಗ್ರಹಗಳನ್ನು ನೀಗಿಸಿದ ಬಗ್ಗೆ ನಿಮಗೆ ಅದೇನೋ ತಪ್ಪಾಭಿಪ್ರಾಯವಿದೆಯೆನಿಸುತ್ತದೆ. ನೀವು ಕಅಬಾ ಭವನದ ಇತಿಹಾಸವನ್ನು ಕಲಿಯುವುದು ಉತ್ತಮ. ಕಅಬಾ ಭವನವನ್ನು ಪ್ರವಾದಿ ಇಬ್ರಾಹೀಮ್(ಅಬ್ರಹಾಮ್) ನಿರ್ಮಿಸಿದರು. ಅಲ್ಲಿ ವಿಗ್ರಹ ಅಥವಾ ಚಿತ್ರಗಳಿರಲಿಲ್ಲ. ಕಾಲಕ್ರಮೇಣ ಕಅಬಾ ಭವನದಲ್ಲಿ ವಿಗ್ರಹ ಮತ್ತು ಚಿತ್ರಗಳನ್ನು ಹೇರಲಾಯಿತು. 360 ವಿಗ್ರಹಗಳನ್ನು 360 ದೇವತೆಗಳೆಂದು ಆ ಏಕದೇವ ಭವನದಲ್ಲಿ ಪ್ರತಿಷ್ಠಾಪಿಸಲಾಯಿತು. ಅವುಗಳನ್ನು ಪ್ರವಾದಿವರ್ಯರು(ಸ) ತೆಗೆಸಿದರೇ ಹೊರತು ಬೇರೇನೂ ಮಾಡಲಿಲ್ಲ. ಇಸ್ಲಾಮ್ ಧರ್ಮವು ಪರಧರ್ಮೀಯರ ಆರಾಧನಾಲಯಗಳನ್ನು ಆಕ್ರಮಿಸಿ ವಿಗ್ರಹ ಮತ್ತು ಚಿತ್ರಗಳನ್ನು ನಾಶಪಡಿಸುವುದಿಲ್ಲ.

## ತತ್ವ ಪ್ರಚಾರ ಮತ್ತು ಆರಾಧನಾ ಸ್ವಾತಂತ್ರ್ಯ

ನಿಮ್ಮ ನಾಲ್ಕನೆಯ ಪ್ರಶ್ನೆಯು ಪ್ರಶ್ನೆಯ ಶೈಲಿಯಲ್ಲಿಲ್ಲ. ನೀವು ಅದರಲ್ಲಿ ಇಸ್ಲಾಮಿನ ಮೇಲೆ ಒಂದು ಆರೋಪವನ್ನು ಹೊರಿಸಿದ್ದೀರಷ್ಟೆ. ಪುಟ 14ರಲ್ಲಿ ರಶ್ಯಾದಲ್ಲಿ ಕಮ್ಯುನಿಸ್ಟ್ ಸರಕಾರವಿದೆ. ಅದು ದೇವನನ್ನು ನಿರಾಕರಿಸುತ್ತದೆ. ಆದರೆ ಅಲ್ಲಿ ವಿಗ್ರಹಗಳನ್ನು ನೀಗಿಸುವ ಧೈರ್ಯ ಯಾರಿಗೂ ಇಲ್ಲವೆಂಬ ವಾಕ್ಯವನ್ನು ನೀವು ಅಪಾರ್ಥ ಮಾಡಿದ್ದೀರಿ. ನಾಸ್ತಿಕ ಸರಕಾರವಾಗಿದ್ದರೂ ವಿಗ್ರಹಗಳನ್ನು ನೀಗಿಸುವ ಧೈರ್ಯ ಯಾಕಿಲ್ಲ? ಕಾರಣ ಸ್ಪಷ್ಟವಿದೆ. ವಿಗ್ರಹಗಳನ್ನು ನೀಗಿಸಿದರೆ, ಅದಕ್ಕೆ ಪರ್ಯಾಯವಾಗಿ ಬೇರೊಂದು ಆರಾಧನಾ ಕ್ರಮ ಕಮ್ಯೂನಿಝಮ್‌ನ ಬಳಿಯಿಲ್ಲ. ಆದರೆ ಇಸ್ಲಾಮ್ ಧರ್ಮವು ಏಕದೇವ ಭವನದಿಂದ ವಿಗ್ರಹಗಳನ್ನು ನೀಗಿಸಿತು. ಕೇವಲ ನಿರಾಕಾರನಾದ ದೇವನನ್ನು ಆರಾಧಿಸುವ ಕ್ರಮವನ್ನು ತೋರಿಸಿಕೊಟ್ಟಿತು. ಅಂತಹ ಶಕ್ತಿ-ಸಾಮರ್ಥ್ಯವನ್ನು ಇಸ್ಲಾಮ್ ಸ್ವಯಂ ಹೊಂದಿದೆಯೆಂದು ಆ ಮಾತಿನಿಂದ ಗ್ರಹಿಸಬಹುದು.

ನೀವು ಒಂದೆರಡು ವಾಕ್ಯಗಳನ್ನೆತ್ತಿ, ಇಸ್ಲಾಮಿನ ಮೇಲೆ ನಿಂದನೆಯ ಆರೋಪ ಹೊರಿಸುತ್ತೀರಿ. ನಿಂದನೆ ಎಂದರೇನು ಅಥವಾ ಹೇಗೆಂದು ಸ್ಪಷ್ಟಪಡಿಸಲಿಲ್ಲ. ಏಕದೇವ ಭವನದಲ್ಲಿ ವಿಗ್ರಹಗಳನ್ನು ಪ್ರತಿಷ್ಠಾಪಿಸಿದ್ದು ಯಥಾರ್ಥ ನಿಂದನೆಯಲ್ಲವೇ? ಅನ್ಯರ ಆರಾಧನಾ ಸ್ವಾತಂತ್ರ್ಯದ ದಮನವು ಮಾನವೀಯ ಮೌಲ್ಯಗಳ ವಿರುದ್ಧವೆಂಬ ವಾದವನ್ನು ಒಪ್ಪುತ್ತೇನೆ. ವಿಗ್ರಹ ಪೂಜೆ, ಚಿತ್ರ ಪೂಜೆಗಳೆಲ್ಲವೂ 'ಮಂದ ಜ್ಞಾನ'ವೆಂದು ಹಿಂದೂ ಧರ್ಮಾಚಾರ್ಯರೇ ಹೇಳಿರುವುದನ್ನು ನೀವು ಜ್ಞಾಪಿಸುವ ಅಗತ್ಯವಿದೆ.

ದೇವನು ನಿರಾಕಾರನೆಂದು ಇಸ್ಲಾಮ್ ಹೇಳುತ್ತದೆ. ದೇವನ ರೂಪ ಕಲ್ಪನೆಯನ್ನು ತೀವ್ರವಾಗಿ ಖಂಡಿಸುತ್ತದೆ. ಕಣ್ಣಿಗೆ ಕಾಣದ ದೇವನ ಚಿತ್ರ ಮತ್ತು ವಿಗ್ರಹಗಳನ್ನು ಭಾವನಾ ವಿಲಾಸದಿಂದ ರಚಿಸಿ, ಇದು ದೇವನೆಂದು ಯಾರೇ ಹೇಳಿದರೂ ಅದು ಮಿಥ್ಯೆಯೆಂದು

ಇಸ್ಲಾಮ್ ಸಾರುತ್ತದೆ. ಈ ಶಿಲೆ ಅಥವಾ ಚಿತ್ರದಲ್ಲಿರುವವನೇ ದೇವನೆನ್ನುವುದನ್ನು ದೇವ ನಿಷೇಧವೆಂದೇ ಇಸ್ಲಾಮ್ ಪರಿಗಣಿಸುತ್ತದೆ. ಗುಪ್ತಾರಿಗೆ ಕೋಪ ಬಂದೀತು ಅಥವಾ ಶರ್ಮಾರಿಗೆ ಬೇಸರವಾದೀತು ಎಂಬ ಭಾವನೆಯಿಂದ ಇಸ್ಲಾಮ್ ಈ ಸಿದ್ಧಾಂತವನ್ನು ಬದಲಾಯಿಸಲಾರದು. ವಿಗ್ರಹ ಮತ್ತು ಚಿತ್ರಗಳನ್ನು ಪೂಜಿಸುವ ಸ್ವಾತಂತ್ರ್ಯ ಇತರರಿಗೆ ಇರಬಹುದು. ಆದರೆ, ಅವರು ನಿರಾಕಾರನಾದ ದೇವನ ಬದಲಾಗಿ ಮಿಥ್ಯ ದೇವರನ್ನು ಪ್ರಾರ್ಥಿಸುತ್ತಿರುವರೆಂದು ಹೇಳುವ ಸ್ವಾತಂತ್ರ್ಯ ಇಸ್ಲಾಮಿಗೂ ಇದೆ. ಅನ್ಯರ ಆರಾಧನಾ ಸ್ವಾತಂತ್ರ್ಯವನ್ನು ಇಸ್ಲಾಮ್ ಸರ್ವಥಾ ಧ್ವಂಸಗೊಳಿಸುವುದಿಲ್ಲ. ಪ್ರವಾದಿವರ್ಯರ(ಸ) ಇಸ್ಲಾಮೀ ರಾಷ್ಟ್ರದಲ್ಲಿ ವಿಭಿನ್ನ ಆರಾಧನಾ ಸಂಪ್ರದಾಯಸ್ಥರು, ವಿಭಿನ್ನ ಜಾತಿ ಮತಸ್ಥರು, ಧೈರ್ಯವಾಗಿ ಬಾಳುತ್ತಿದ್ದರು. ಅಂದ ಮಾತ್ರಕ್ಕೆ ತತ್ತ್ವ ಸಿದ್ಧಾಂತಗಳನ್ನು ಸ್ವಯಂ ಹೊಸಕಿ ಹಾಕಲು ಇಸ್ಲಾಮ್ ಸಿದ್ಧವಿಲ್ಲ. ಆದ್ದರಿಂದಲೇ ಇಸ್ಲಾಮೀ ವೇದಗ್ರಂಥ ಹೀಗೆ ಸಾರಿದೆ: "ನಾನು ಆರಾಧಿಸುವ ದೇವನನ್ನು ನೀವು ಆರಾಧಿಸುವುದಿಲ್ಲ, ನೀವು ಆರಾಧಿಸುವವುಗಳನ್ನು ನಾನು ಆರಾಧಿಸುವುದಿಲ್ಲ. ನಿಮಗೆ ನಿಮ್ಮ ಧರ್ಮ, ನನಗೆ ನನ್ನ ಧರ್ಮ."(ಪವಿತ್ರ ಕುರ್‌ಆನ್, 109)

"ಪ್ರವಾದಿವರ್ಯರು(ಸ) ದೇವಮಾರ್ಗವನ್ನು ಕಲಿಸುವ ಗುರು ಮತ್ತು ಸೇನಾಧಿಪತಿ ಯಾಗಿದ್ದರು. ಈ ಎರಡು ವೈಶಿಷ್ಟ್ಯಗಳು ಕೇವಲ ಪ್ರವಾದಿವರ್ಯರ(ಸ) ವ್ಯಕ್ತಿತ್ವದಲ್ಲಿ ಮಾತ್ರ ಕಂಡು ಬರುತ್ತದೆ" ಎಂಬ ನನ್ನ ವಾಕ್ಯಗಳನ್ನು ಉದ್ಧರಿಸಿ, ನಿಂದೆ ಮತ್ತು ಅಪಹಾಸ್ಯದ ದನಿಯಲ್ಲಿ ಕೆಲವು ಪ್ರಶ್ನೆಗಳನ್ನು ಕೇಳಿದ್ದೀರಿ.

**ಗುಪ್ತಾ:** ನೀವು ಮಹಾಭಾರತವನ್ನು ಓದಿಲ್ಲವೇ?

**ನಾನು:** ಸ್ವಲ್ಪ ಓದಿದ್ದೇನೆ... 'ದ್ವಿತೀಯ ಭಾರತ' ಎಂಬ ಹೆಸರಲ್ಲಿ ಸಂಶೋಧನಾತ್ಮಕ ಗ್ರಂಥ ಬರೆದಿದ್ದೇನೆ.

**ಗುಪ್ತಾ:** ಗೀತೋಪದೇಶ ಮಾಡಿದ ಕೃಷ್ಣನ ಬಗ್ಗೆ ಕೇಳಿಲ್ಲವೇ?

**ನಾನು:** ಸ್ವಲ್ಪ ಕೇಳಿದ್ದೇನೆ. ಕೃಷ್ಣನ ಆತ್ಮ ವಿಮರ್ಶೆಯ ವಿಶ್ಲೇಷಣೆ ಬರೆದಿದ್ದೇನೆ.

**ಗುಪ್ತಾ:** ಕೃಷ್ಣನ ಚರಿತ್ರೆ ಓದಿದ್ದರೆ ಆತ 16 ಸೇನಾದಳಗಳ ನಾಯಕನೆಂದು ನಿಮಗೆ ತಿಳಿದಿರಬಹುದು.

**ನಾನು:** ಹೌದು, ಆತನು ಸೇನಾಧಿಪತಿಯಾಗಿದ್ದನು. ಆದರೆ ಏಕದೇವ ಸಿದ್ಧಾಂತದ ಪ್ರಚಾರಕನಾಗಿದ್ದನೇ? ಇಲ್ಲ. ಗೀತೆಯು ಸಂಪೂರ್ಣ ಏಕದೇವಾಧಿಷ್ಠಿತವಲ್ಲ. ಅದರಲ್ಲಿ ಅನೇಕ ದೇವಂದಿರುಗಳು ಪ್ರವೇಶಿಸುತ್ತಾರೆ. ಮಾನವನಾಗಿ ಹುಟ್ಟಿದವನು ಭಗವಾನ್ ಆಗುವನೆಂಬ ಕಲ್ಪನೆಯು ಇಸ್ಲಾಮಿನ ದೇವವಿಶ್ವಾಸಕ್ಕೆ ವಿರುದ್ಧವಾಗಿದೆ. ಕೃಷ್ಣನು ಏಕದೇವ ಸಿದ್ಧಾಂತದ ಪ್ರಚಾರಕನಲ್ಲ. ಆದ್ದರಿಂದ ಪ್ರವಾದಿಯ(ಸ) ವ್ಯಕ್ತಿತ್ವದಲ್ಲಿದ್ದ ಎರಡು ವೈಶಿಷ್ಟ್ಯಗಳು ಆತನಲ್ಲಿ ಒಂದುಗೂಡಿಲ್ಲ. ಇದನ್ನು ನಿಮ್ಮ ಮನಸ್ಸು ಒಪ್ಪಬಹುದೇನೋ?

ವೇದಗಳು, ಮೂಲತಃ ಋಷಿಮುನಿಗಳು ದೇವನನ್ನು ಸ್ತುತಿಸಿದ ಕೀರ್ತನೆಗಳ ಸಂಗ್ರಹ ವಾಗಿದೆ ಎಂಬ ನನ್ನ ವಾಕ್ಯವನ್ನು ಪ್ರಸ್ತಾವಿಸಿ, ನೀವು ವೇದಗಳನ್ನು ವಿವರಿಸಿದ್ದೀರಿ. "ನಾಲ್ಕು

ವೇದಗಳಿವೆ. ಅವು ವಿಭಿನ್ನ ವಿಷಯಗಳನ್ನು ಹೊಂದಿವೆ. ದೇವಸ್ತುತಿಯ ಹೊರತಾಗಿ ಗಣಿತ, ವಿಜ್ಞಾನ, ಜೀವನದರ್ಶನ, ಅಖಿಲ ಚರಾಚರಗಳ ಸೃಷ್ಟಿಕ್ರಿಯೆ ಇತ್ಯಾದಿ ವೈವಿಧ್ಯಮಯ ವಿಷಯಗಳು ವೇದದಲ್ಲಿವೆ" ಮುಂದುವರಿಯುತ್ತಾ ವೇದ ಕಲಿಯಲು ಸ್ವಲ್ಪ ಸಮಯ ವಿನಿಯೋಗಿಸಬೇಕೆಂಬ ಉಪದೇಶವನ್ನೂ ಸೇರಿಸಿದ್ದೀರಿ.

ವೇದಗಳ ಅಧ್ಯಯನ ನಡೆಸಿದ ಬಳಿಕವೇ ನಾನು ಮೇಲಿನ ಅಭಿಪ್ರಾಯಕ್ಕೆ ಬಂದಿದ್ದೇನೆ. ವೇದಗಳು ದೇವ ವಚನಗಳಲ್ಲವೆಂದೇ ಆ ಹೇಳಿಕೆಯ ತಾತ್ಪರ್ಯ. ಅವುಗಳಲ್ಲಿ ಋಷಿಮುನಿಗಳ ವಚನಗಳಿರುವುದನ್ನು ಪ್ರಾಯಶಃ ನೀವು ನಿರಾಕರಿಸಲಾರಿರಿ. ವೇದಗಳಲ್ಲಿ ನೀವು ಹೇಳಿರುವುದಕ್ಕಿಂತ ಹೆಚ್ಚು ವಿಷಯಗಳಿವೆಯೆಂದು ನಾನು ನಂಬುತ್ತೇನೆ. ಅಖಿಲ ವಸ್ತುಗಳ ಸೃಷ್ಟಿಯಂತೆಯೇ ಚಾತುರ್ವರ್ಣ ಸೃಷ್ಟಿಯ ಕುರಿತು ವೇದಗಳಲ್ಲಿ ಹೇಳಿರುವುದನ್ನೂ ನಾನು ಓದಿದ್ದೇನೆ.

(ಋಗ್ವೇದ: ಪುರುಷ ಸೂಕ್ತ)

23ನೇ ಪುಟದಲ್ಲಿ ಪವಿತ್ರ ಕುರ್‌ಆನ್ ಗ್ರಂಥವನ್ನು ಸುರಕ್ಷಿತ ಫಲಕದಲ್ಲಿ ಇರಿಸಲಾಗಿದೆಯೆಂದು ಹೇಳಿರುವುದನ್ನು ನೀವು ಪ್ರಶ್ನಿಸಿದ್ದೀರಿ. ದೇವನು ನಿರಾಕಾರನು ಮತ್ತು ಪಂಚೇಂದ್ರಿಯಗಳಿಲ್ಲದವನೆಂದು ಕುರ್‌ಆನ್ ಹೇಳಿದೆ. ಅಂತಹ ಒಂದು ಚೇತನವು ಕುರ್‌ಆನನ್ನು 'ಲೌಹಿಮ್‌ಮಹ್ಫೂಝ್'(ಸುರಕ್ಷಿತ ಫಲಕ)ನಲ್ಲಿ ಹೇಗೆ ತಾನೇ ಇರಿಸಿತು?

ಉತ್ತರ: ನಿರಾಕಾರನಾದ ದೇವನು ಆಕಾರ ಸೌಂದರ್ಯವಿರುವ ಲೋಕವನ್ನು ಸೃಷ್ಟಿಸಿ ಪರಿಪಾಲಿಸುತ್ತಿದ್ದಾನೆ. ಆ ಮಹಾಶಕ್ತಿಗೆ ಕುರ್‌ಆನನ್ನು ಸುರಕ್ಷಿತ ಫಲಕದಲ್ಲಿರಿಸಲು ಅಸಾಧ್ಯವೇ? ದೇವನಿಗೆ ಸರ್ವಶಕ್ತನೆಂಬ ನಾಮವೂ ಇದೆಯಷ್ಟೆ.

ಪ್ರಶ್ನೆ: ಮಾನವೇತಿಹಾಸವು ಕೋಟ್ಯಂತರ ವರುಷಗಳ ಹಿಂದೆಯೇ ಆರಂಭಗೊಂಡಿರುವಾಗ ದೇವನು ಕುರ್‌ಆನ್ ಗ್ರಂಥವನ್ನು ಪ್ರವಾದಿಗಿಂತ(ಸ) ಮುಂಚೆ ಯಾಕೆ ಅವತೀರ್ಣಗೊಳಿಸಲಿಲ್ಲ.

ಉತ್ತರ: ಇಸ್ಲಾಮೀ ಇತಿಹಾಸವನ್ನು ನೀವು ಕಲಿಯಬೇಕಾಗಿದೆ. ಪ್ರವಾದಿ ವರ್ಯರಿಗಿಂತ(ಸ) ಹಿಂದೆ ಆಗತರಾದ ಪ್ರವಾದಿ ಮೂಸಾ, ದಾವೂದ್ ಮತ್ತು ಈಸಾರಿಗೆ(ಅ) ಕ್ರಮಾನುಗತವಾಗಿ ತೌರಾತ್, ಝುಬೂರ್, ಇಂಜೀಲ್ ಎಂಬ ಗ್ರಂಥಗಳು ಅವತೀರ್ಣಗೊಂಡಿವೆ.

## ಕುರ್‌ಆನ್ ಒಂದೇ ಬಾರಿ ಅವತೀರ್ಣವಾಗಿಲ್ಲವೇಕೆ?

"ಸುರಕ್ಷಿತ ಫಲಕದ ಆ ಗ್ರಂಥದಿಂದ ಆದರಣೀಯ ದೇವಚರ ಜಿಬ್ರೀಲ್‌ರು(ಅ) ಆಗಾಗ ಪ್ರವಾದಿ ಮುಹಮ್ಮದ್‌ರಿಗೆ(ಸ) ಅದನ್ನು ತಲಪಿಸಿದರು" ಎಂಬ ವಾಕ್ಯವನ್ನೆತ್ತಿ, ಅಲ್ಲಾಹನೇ ಅದನ್ನು ನೇರವಾಗಿ ಯಾಕೆ ಅವತೀರ್ಣಗೊಳಿಸಿಲ್ಲವೆಂದು ಪ್ರಶ್ನಿಸಿದ್ದೀರಿ. ಅದು ಆತನ ಯುಕ್ತಿಯಾಗಿದೆ. ಪವಿತ್ರ ಕುರ್‌ಆನಿನಲ್ಲಿ 'ಅಲ್ಲಾಹನು ಸರ್ವಜ್ಞ' ಎಂಬ ನುಡಿಯು ಹಲವು ಬಾರಿ ಪುನರಾವರ್ತನೆಯಾಗಿರುವುದನ್ನು ಇಲ್ಲಿ ಜ್ಞಾಪಿಸುವುದು ಸೂಕ್ತ.

ಪ್ರಶ್ನೆ: ಒಮ್ಮೆಲೆ ನೀಡದೆ ಆಂಶಿಕವಾಗಿ ಇಳಿಸಿದ್ದೇಕೆ? ಧರ್ಮ ಗ್ರಂಥವನ್ನು ಏಕಾಏಕಿ ಅವತೀರ್ಣಗೊಳಿಸಬಹುದಿತ್ತಲ್ಲವೇ?

ಉತ್ತರ: ಈ ಪ್ರಶ್ನೆಗೆ ದೇವನು ಪವಿತ್ರ ಗ್ರಂಥದಲ್ಲಿಯೇ ಉತ್ತರಿಸಿದ್ದಾನೆ. ಒಮ್ಮೆಲೆ ಅವತೀರ್ಣಗೊಳಿಸುತ್ತಿದ್ದರೆ ನಿಮಗೆ ಗ್ರಹಿಸಲು ಕಷ್ಟವಾಗುತ್ತಿತ್ತು ಎಂಬ ಕಾರಣದಿಂದ ನಾವು ಅದನ್ನು ಹಂತಹಂತವಾಗಿ ಇಳಿಸಿರುವೆವೆಂದು ಆತನು ಸ್ಪಷ್ಟಪಡಿಸಿದ್ದಾನೆ.

## ಉಚ್ಚಾರ ಮತ್ತು ವಾಚನ

ಪುಟ 27ರಲ್ಲಿ, ದೇವನಿಂದ ಅವತೀರ್ಣವಾದ ಗ್ರಂಥವನ್ನು ಮೊಟ್ಟಮೊದಲು ಓದಿದ ವ್ಯಕ್ತಿ ಉಮ್ಮಿ(ನಿರಕ್ಷರಿ) ಅರ್ಥಾತ್ ಓದುಬರಹ ಬಾರದವರಾಗಿದ್ದರು ಎಂಬ ಮಾತನ್ನು ಉದ್ಧರಿಸಿ ನೀವು ಕೇಳಿದ್ದೀರಿ. ಓದು ಬರಹ ಬಾರದ ಓರ್ವರಿಗೆ, ಅರ್ಥವಾಗ ಬಹುದಾದರೂ ಅವರು ಅದನ್ನು ಓದುವುದು ಹೇಗೆ?

ಉತ್ತರ: ನೀವು ಪವಿತ್ರ ಕುರ್‌ಆನನ್ನು ಅನೇಕ ಬಾರಿ ಓದಿರುವಿರೆಂದು ತಿಳಿಸಿದ್ದೀರಿ, ಅನೇಕ ಇಸ್ಲಾಮೀ ಸಾಹಿತ್ಯಗಳನ್ನೂ ಓದಿರುವಿರಷ್ಟೇ. ಹಾಗಿದ್ದರೂ ನೀವು 'ವಹ್ಯ್'ನ ಬಗ್ಗೆ ಅರಿತಿಲ್ಲವೇ? ವಹ್ಯ್(ದಿವ್ಯವಾಣಿ) ಪ್ರವಾದಿವರ್ಯರಿಗೆ(ಸ) ಅವತೀರ್ಣವಾಗುತ್ತದೆ. ಆ ಸಂದೇಶವನ್ನು ಪ್ರವಾದಿವರ್ಯರು(ಸ) ಬಾಯಿಯಿಂದ ಉಚ್ಚರಿಸುವಾಗಲೇ ಅದು ಅವರಿಗೆ ಕಂಠಸ್ಥವಾಗುತ್ತಿತ್ತು. ಅವರ ಅನುಯಾಯಿಗಳು ಅದನ್ನು ದಾಖಲಿಸಿಡುತ್ತಿದ್ದರು. ಅನಂತರ ಅದನ್ನು ಗ್ರಂಥ ರೂಪದಲ್ಲಿ ಕ್ರೋಡೀಕರಿಸಲಾಯಿತು. ಅಕ್ಷರ ನೋಡಿ ಓದುವುದು ಮತ್ತು ಕಂಠಪಾಠವಾಗಿರುವುದನ್ನು ಉಚ್ಚರಿಸುವುದರಲ್ಲಿರುವ ವ್ಯತ್ಯಾಸ ನಿಮಗೆ ಈಗ ಮನವರಿಕೆಯಾಗಿರಬಹುದು.

## ಸಂಸ್ಕೃತ ಮತ್ತು ಪ್ರಾಕೃತ

30ನೇ ಪುಟದಲ್ಲಿ, ವೇದವು ಸಂಸ್ಕೃತದಲ್ಲಿಲ್ಲ. ಅದಕ್ಕಿಂತ ಮೊದಲಿನ ಯಾವುದೋ ಭಾಷೆಯಲ್ಲಿ ರಚಿಸಿದ್ದಾಗಿರಬಹುದೆಂಬ ವಿಮರ್ಶೆಯನ್ನು ನೀವು ಪ್ರಶ್ನಿಸಿದ್ದೀರಿ. "ನಾನು(ಗುಪ್ತಾ) ತಿಳಿದ ಮಟ್ಟಿಗೆ ವೇದವು ಸಂಸ್ಕೃತದಲ್ಲಿಯೇ ಬರೆಯಲ್ಪಟ್ಟಿದೆ. ಅದನ್ನು ಬರೆದ ಮುನಿವರ್ಯರಿಗೆ ಸಂಸ್ಕೃತ ಚೆನ್ನಾಗಿ ಬರುತ್ತಿತ್ತು. ಸಂಸ್ಕೃತಕ್ಕಿಂತ ಮುಂಚೆ ಬೇರೆ ಭಾಷೆಯಿದ್ದರೆ, ಅದು ಯಾವುದೆಂದು ತಿಳಿಸುವಿರಾ?"

ಋಷಿವರೇಣ್ಯರು ವೇದವನ್ನು ಆದಿಯಲ್ಲಿಯೇ ಉಲ್ಲೇಖಿಸಿರಲಿಲ್ಲ. ಅದು ಬಾಯ್ದೆರೆಯಾಗಿ ಮತ್ತು ಕಿವಿಯಿಂದ ಕಿವಿಗೆ ಸಾಗುತ್ತಾ ಉಳಿದು ಬಂತು. ವೇದಕ್ಕೆ 'ಶ್ರುತಿ' ಎಂಬ ಹೆಸರಿರುವುದು ಗಮನಾರ್ಹ. ಸಂಸ್ಕೃತವು ಅನಂತರ ಹುಟ್ಟಿದ ಭಾಷೆಯೆಂದು ಆ ಹೆಸರೇ ಸೂಚಿಸುತ್ತದೆ. 'ಸಮಸ್ ಕೃತಮ್' ಎಂದರೆ ಹೊಸತಾಗಿ ರೂಪಿಸಿದ ಭಾಷೆ ಎಂದರ್ಥ. ಸಂಸ್ಕೃತಕ್ಕಿಂತ ಮೊದಲಿನ ಭಾಷೆ ಪ್ರಾಕೃತ(ಹಳೆಯದು). ಅದಕ್ಕಿಂತ ಮೊದಲಿದ್ದ ಭಾಷೆಯೇ ಲಿಪಿಯಿಲ್ಲದ ಉಚ್ಚಾರ ರೂಪದಲ್ಲಿದ್ದ ವೇದ ಭಾಷೆ. ಇಂದಿಗೂ ಲಿಪಿಯಿಲ್ಲದ ಅನೇಕ ಭಾಷೆಗಳು ರೂಢಿಯಲ್ಲಿವೆ.

## ವೇದ ಓದಿದವರ ಗತಿ

34ನೇ ಪುಟದಲ್ಲಿರುವ "ಕೆಲವರನ್ನು ವೇದ ಓದಿದ ಅಥವಾ ಆಲಿಸಿದ ಅಪರಾಧಕ್ಕಾಗಿ ಶಿಕ್ಷಿಸಲಾಯಿತೆಂದು ಇತಿಹಾಸದಿಂದ ತಿಳಿದು ಬರುತ್ತದೆ" ಎಂಬ ಪ್ರಸ್ತಾಪವನ್ನು ವಿಮರ್ಶಿಸುತ್ತಾ, ನಿಮ್ಮ ಆ ಅಭಿಪ್ರಾಯ ನಿಜ. ಧರ್ಮ ಮತ್ತು ವೇದವನ್ನು ಸ್ವಾರ್ಥ ಹಿತಾಸಕ್ತಿಗಳಿಗಾಗಿ ಬಳಸಿದವರಿಗೆ ಅಂತಹ ಶಿಕ್ಷೆಗಳನ್ನು ನೀಡಲಾಯಿತು. ಅವರೆಲ್ಲರೂ ದುಷ್ಟರಾಗಿದ್ದರು. ವೇದವು ಎಲ್ಲರಿಗೂ ಓದಲಿಕ್ಕಿರುವುದಲ್ಲವೆಂದು ವೇದದಲ್ಲೆಲ್ಲೂ ಹೇಳಿಲ್ಲ. ಸ್ವಾಮಿ ದಯಾನಂದರು ಬರೆದ 'ಸತ್ಯಾರ್ಥ ಪ್ರಕಾಶ್' ಓದಿರೆಂದು ನೀವು ಉಪದೇಶಿಸಿದ್ದೀರಿ.

ಶ್ರೀಮಾನ್ ಗುಪ್ತಾರವರೇ!

ನಿಮ್ಮ ಈ ಪರಾಮರ್ಶೆ ವಿಚಿತ್ರವಾಗಿದೆ. ವೇದವನ್ನು ಓದುವ ಅಥವಾ ಆಲಿಸುವ ಎಲ್ಲರೂ ದುಷ್ಟರಾಗುವುದು ಹೇಗೆ? ಜ್ಞಾನ ಸಂಪಾದನೆಗಾಗಿಯೂ ಓರ್ವ ಅದನ್ನು ಓದಬಹುದಲ್ಲವೇ? ವೇದದಲ್ಲಿ ಏನಿದೆಯೆಂದು ತಿಳಿಯಲು ವೇದ ಓದಬೇಕು ತಾನೇ? ಈ ಬಗ್ಗೆ ನೀವು ಆಧಾರ ಹುಡುಕಿಲ್ಲ! ಶ್ರೀರಾಮನ ಆಡಳಿತ ಕಾಲದಲ್ಲಿ ಜಂಬೂಕನೆಂಬ ಶೂದ್ರನು ವೇದ ಪಾರಾಯಣಕ್ಕೆ ತೊಡಗಿದಾಗ ದಂಡನೆಗೆ ಗುರಿಯಾದನೆಂದು ನಾವು ಓದಿದ್ದೇವೆ. ಸ್ವಾಮಿ ದಯಾನಂದರು ಮಹಾ ಜ್ಞಾನಿಯಾಗಿದ್ದರು. ಹಿಂದೂ ಧರ್ಮದ ದೌರ್ಬಲ್ಯಗಳನ್ನು ಅವರು ಜ್ಞಾನವಾದದಿಂದ ಮುಚ್ಚಲು ಪ್ರಯತ್ನಿಸಿದ್ದಾರೆ. ಎಲ್ಲರೂ ವೇದವನ್ನು ಓದಬಾರದೆಂದು ವೇದದಲ್ಲಿಲ್ಲವೆಂದು ಸ್ವಾಮೀಜಿ ಹೇಳಿರಬಹುದು. ಆದರೆ, ಅವರಿಗಿಂತ ಮುಂಚೆ ಈ ದೇಶದಲ್ಲಿ ಬಾಳಿದ ಮಹಾಜ್ಞಾನಿ ಮನು ತನ್ನ ಮನುಸ್ಮೃತಿಯಲ್ಲಿ ಹೇಳಿರುವುದನ್ನು ನೀವು ಓದಿದ್ದೀರಾ? ವೇದ ಓದುವ ಅಥವಾ ಆಲಿಸುವವರಿಗೆ ಮನುಶಾಸ್ತ್ರವು ವಿಧಿಸುವ ದಂಡನೆಯನ್ನು ಓದಿದರೆ ಗುಪ್ತರಂಥವರಿಗೆ ರಾತ್ರಿ ನಿದ್ದೆ ಬರಲಾರದು!

## ಕುರ್‌ಆನ್ ಮಾನವಕುಲಕ್ಕೆ

52ನೇ ಪುಟದಲ್ಲಿರುವ "ಪ್ರವಾದಿ ಮೂಸಾರಿಗೆ(ಅ) ತೌರಾತನ್ನು ಒಮ್ಮೆಲೇ ನೀಡಲಾಗಿತ್ತು. ಆದರೆ ಕುರ್‌ಆನ್ ಒಂದೇ ಸಲ ಅವತೀರ್ಣವಾಗಲಿಲ್ಲ" ಎಂಬ ಮಾತನ್ನು ನೀವು ಪ್ರಶ್ನಿಸಿದ್ದೀರಿ. ಕುರ್‌ಆನಿನಂತೆ ತೌರಾತ್ ಕೂಡಾ ದೇವನಿಂದ ಅವತೀರ್ಣಗೊಂಡ ಗ್ರಂಥವಲ್ಲವೇ? ಹೀಗಿರುತ್ತಾ ಅವುಗಳ ಮಧ್ಯೆ ಈ ಭಿನ್ನತೆಯೇಕೆ? ಎರಡು ಅಚ್ಚುಗಳನ್ನು ಇಳಿಸುವ ಅಗತ್ಯವೇನು? ಎಂಬ ಪ್ರಶ್ನೆ ತರ್ಕಬದ್ಧವಾಗಿದೆ.

ಪ್ರವಾದಿ ಮೂಸಾರಿಗೆ(ಅ) ಅವತೀರ್ಣಗೊಂಡ ಗ್ರಂಥವನ್ನು ಅವರ ಜನತೆಯು (ಯಹೂದಿ) ಸುದೃಢವಾಗಿ ಹಿಮ್ಮಿಕೊಳ್ಳಲಿಲ್ಲ. ಮಾತ್ರವಲ್ಲದೇ ಆ ವೇದವನ್ನು ಅವರು ಓರ್ವ ಚಾರನ ಗುತ್ತಿಗೆಯಾಗಿ ಮಾಡಿದರು. ಅವರು ಅದನ್ನು ಸ್ವಯಂ ಮೈಗೂಡಿಸಲಿಲ್ಲ ಅಥವಾ ಅನ್ಯರಿಗೆ ತಿಳಿಯಪಡಿಸಲಿಲ್ಲ. ಇಡೀ ಜಗತ್ತಿಗೆ ಸಮಗ್ರ ವೇದವು ಪವಿತ್ರ ಕುರ್‌ಆನ್-ಪ್ರವಾದಿವರ್ಯರ(ಸ) ಮೂಲಕ ಅವತೀರ್ಣವಾಗಬೇಕೆಂದು ದೇವನು ಅಪೇಕ್ಷಿಸಿದ್ದನು. ವಿವಿಧ ಕಾಲಗಳಲ್ಲಿ ಅಂತಹ ವೇದಗಳು ಅವತೀರ್ಣಗೊಂಡಿದ್ದುವು.

## ಧರ್ಮ ಮತ್ತು ಖಡ್ಗ

ಪುಟ 49ರಲ್ಲಿ "ಇಸ್ಲಾಮ್ ಖಡ್ಗದಿಂದ ಪ್ರಚಾರಗೊಂಡಿತೆಂಬ ವಾದವು ಮಿಥ್ಯ"ವೆಂದು ಬರೆಯಲಾಗಿದೆ; ಆದರೆ 74ನೇ ಪುಟದಲ್ಲಿ ಝಕಾತ್ ನೀಡಲು ನಿರಾಕರಿಸಿದವರ ವಿರುದ್ಧ- ಅವರು ಮುಸ್ಲಿಮರಾಗಿದ್ದರೂ - ಇಸ್ಲಾಮಿನ ಖಡ್ಗವು ಅವರತ್ತ ತಿರುಗುವುದು. ಈ ಭಾಗವನ್ನು ಉದ್ಧರಿಸಿ ಅವುಗಳಲ್ಲಿ ಯಾವುದು ಸರಿ? ಇಲ್ಲಿ ಖಡ್ಗದ ಅರ್ಥವೇನು? ಧರ್ಮವು ಮನಃ ಪೂರ್ವಕವಾಗಿ ಅಂಗೀಕರಿಸಬೇಕಾದ ಸಿದ್ಧಾಂತವಲ್ಲವೇ? ಇಲ್ಲಿ ಖಡ್ಗಕ್ಕೆ ಸ್ಥಾನವೆಲ್ಲಿದೆ? ಎಂದು ಮುಂತಾಗಿ ಪ್ರಶ್ನಿಸಿದ್ದೀರಿ.

ಇಸ್ಲಾಮ್ ಖಡ್ಗದಿಂದ ವ್ಯಾಪಿಸಿಲ್ಲ. ಇದೊಂದು ನಗ್ನ ಸತ್ಯ. ಇಸ್ಲಾಮಿ ಇತಿಹಾಸದಲ್ಲಿ ಖಡ್ಗವಿತ್ತೆನ್ನುವುದೂ ಅಷ್ಟೇ ನಿಜ. ಸ್ವಯಂ ಪ್ರವಾದಿವರ್ಯರೇ(ಸ) ಸೇನಾದಿರಿಸು ಧರಿಸಿ, ಖಡ್ಗ ಹಿಡಿದು ಯುದ್ಧ ಮಾಡಿ ಗಾಯಗೊಂಡ ಘಟನೆಯನ್ನೂ ನಾವು ಇತಿಹಾಸದಲ್ಲಿ ಓದಿದ್ದೇವೆ. ಆದರೆ ಅದು ಯಾಕಾಗಿ? ಇಸ್ಲಾಮಿನ ನಾಶಕ್ಕಾಗಿ ವೈರಿ ಸೇನೆಯು ಖಡ್ಗದಾರಿಯಾಗಿ ಬಂದಾಗ, ಇಸ್ಲಾಮ್ ಆತ್ಮ ರಕ್ಷಣೆಗಾಗಿ ಖಡ್ಗಧಾರಿಯಾಗುತ್ತದೆ. ವೈರಿ ಸೇನೆಯು ಶಸ್ತ್ರ ಸಜ್ಜಿತರಾಗಿ ಬಂದಾಗ, ಮುಸ್ಲಿಮರೆಲ್ಲರೂ ನಿರಾಯುಧರಾಗಿದ್ದರೆ ಅವರ ಗತಿ ಏನಾದೀತು? ಇಸ್ಲಾಮಿನ ಕುರಿತು ಓದಲು ಗುಪ್ತಾರಿಗೆ ಏನೂ ಉಳಿಯುತ್ತಿರಲಿಲ್ಲ. ಹಾಗೆಯೇ, ಇಸ್ಲಾಮಿನ ಐದು ಕಡ್ಡಾಯ ವಿಧಿಗಳಲ್ಲಿ ಒಂದಾಗಿರುವ 'ಝಕಾತ್' ನೀಡಲು, ಮುಸ್ಲಿಮರ ಒಂದು ಗುಂಪು ನಿರಾಕರಿಸಿತು. ರಾಷ್ಟ್ರದೊಡನೆ ಯುದ್ಧ ಸಾರಿತು! ಆ ಬಂಡುಕೋರರ ವಿರುದ್ಧ ಪ್ರಥಮ ಖಲೀಫರು ಖಡ್ಗವೆತ್ತಿದರು. ಇದು ನ್ಯಾಯಪಾಲನೆಯ ರಾಜನೀತಿಯಾಗಿದೆ.

ನೀವು(ಗುಪ್ತಾ) ಇನ್ನೊಂದು ವಿಚಾರವನ್ನು ಗಮನಿಸಬೇಕು. ಧರ್ಮಗಳ ಇತಿಹಾಸದಲ್ಲಿ ಖಡ್ಗಕ್ಕೂ ಏನಾದರೊಂದು ಪಾತ್ರವಿರಬಹುದು. ಹಿಂದೂ ಧರ್ಮದ ಬಹುಮಂದಿ ದೇವತೆಯರು ಆಯುಧಧಾರಿಗಳಾಗಿರುವುದರ ಮರ್ಮವೇನು? ದುಷ್ಟರನ್ನು ನಿಗ್ರಹಿಸಿ, ಶಿಷ್ಟರನ್ನು ರಕ್ಷಿಸುವುದೇ ಅದರ ನೀತಿಯಾಗಿದೆ. ಯೇಸುಕ್ರಿಸ್ತರನ್ನು ಅಹಿಂಸೆ ಮತ್ತು ಪ್ರೇಮದ ಮಹಾ ಪ್ರಚಾರಕರೆಂದು ವರ್ಣಿಸಲಾಗುತ್ತಿದೆ. ಎಡ ಕೆನ್ನೆಗೆ ಹೊಡೆದರೆ ಬಲ ಕೆನ್ನೆ ತೋರಿಸೆಂದು ಅವರು ಹೇಳಿದರು. ಅಂತಹ ಯೇಸುಕ್ರಿಸ್ತರು, ದೇವ ಮಂದಿರವನ್ನು ಜೂಜುಕೋರರು ಮತ್ತು ಚಿನ್ನದ ವ್ಯಾಪಾರಿ ಗಳು ವಶಪಡಿಸಿದಾಗ, ಕುಪಿತರಾಗಿ ಸುತ್ತಿಗೆಯಿಂದ ಹೊಡೆದು ಕೊಂದರೆಂದು ಚರಿತ್ರೆ ಹೇಳುತ್ತದೆ. ಯೇಸುಕ್ರಿಸ್ತನ ಶಿಷ್ಯ ಪೇತ್ರನು ಆತ್ಮರಕ್ಷಣೆಗಾಗಿ ಖಡ್ಗವಿರಿಸಿದ್ದನು. ಒಮ್ಮೆ ವೈರಿಯ ಕಿವಿ ಕಡಿದನೆಂದೂ ಬೈಬಲ್‌ನಲ್ಲಿ ನೀವು ಓದಿಲ್ಲವೇ? ಅಹಿಂಸಾವಾದಿಯಾಗಿದ್ದ ತಮಿಳ್ನಾಡಿನ ವೈಶ್ಯರು ಶೈವ ಪಂಥದ ಶ್ರೀ ಜ್ಞಾನ ತೀರ್ಥರ ಮಠಕ್ಕೆ ಕೊಳ್ಳಿಯಿಟ್ಟರು. ಅದಕ್ಕೆ ಪ್ರತೀಕಾರವಾಗಿ 8000 ವೈಶ್ಯರನ್ನು ಗಲ್ಲಿಗೇರಿಸಲಾಯಿತು. ಇದು ಐತಿಹಾಸಿಕ ಸತ್ಯ!

ಎಲ್ಲಾ ಧರ್ಮಗಳ ಇತಿಹಾಸದಲ್ಲಿಯೂ ಖಡ್ಗದ ಪಾತ್ರವಿತ್ತೆಂದು ಜ್ಞಾಪಿಸಲಿಕ್ಕಾಗಿ ಮಾತ್ರ ಅವುಗಳನ್ನು ಇಲ್ಲಿ ಪ್ರಸ್ತಾಪಿಸಿದ್ದೇನೆ. ಧರ್ಮವು ಮನಸಾರೆ ಮಾತ್ರ ಅಂಗೀಕರಿಸಬೇಕಾದ

ಸಿದ್ಧಾಂತ. ಹಾಗಿದ್ದರೂ ಪ್ರತಿಯೊಂದು ಧರ್ಮದಲ್ಲಿಯೂ ಖಡ್ಗಕ್ಕೆ ಅದರದೇ ಪಾತ್ರವಿದೆ. ಇಸ್ಲಾಮಿನ ಖಡ್ಗವನ್ನು ಸಂರಕ್ಷಣೆ ಮತ್ತು ನ್ಯಾಯ ಪಾಲನೆಗಾಗಿ ಬಳಸಲಾಯಿತು.

## ಯುದ್ಧದಿಂದ ಧರ್ಮ ಪ್ರಚಾರ

88ನೇ ಪುಟದಲ್ಲಿ "ಭಾರತದ ಅರಸರು ಸೈನಿಕ ಆಕ್ರಮಣಗಳನ್ನು ನಡೆಸಿ ಹೊರ ರಾಷ್ಟ್ರಗಳಲ್ಲಿಯೂ ತಮ್ಮ ಧರ್ಮವನ್ನು ಹಬ್ಬಿಸಿದರು. ಜಾವಾ, ಸುಮಾತ್ರ, ಕೆಂಬೋಡಿಯಾ ಮುಂತಾದೆಡೆಗಳಲ್ಲಿ ಇಂದಿಗೂ ಹಿಂದೂ ಧರ್ಮದ ಪ್ರಭಾವ ಗೋಚರಿಸುತ್ತದೆ. "ಅಲ್ಲಿ ವಿಗ್ರಹಗಳಿವೆ" ಎಂಬ ಭಾಗವನ್ನು ಉಲ್ಲೇಖಿಸಿ ನೀವು "ಸರಿ. ಅದು ನಿಜ. ಜಾವಾ, ಸುಮಾತ್ರ, ಕೆಂಬೋಡಿಯಾಗಳಲ್ಲಿ ಮಾತ್ರವಲ್ಲದೇ ಅರಬ್ ರಾಷ್ಟ್ರಗಳಲ್ಲಿಯೂ ವಿಗ್ರಹಗಳು ಕಂಡು ಬಂದಿವೆ. ಅದು ಹಿಂದೂ ಧರ್ಮವು ಕೇವಲ ಭಾರತಕ್ಕೆ ಸೀಮಿತವಾಗಿರಲಿಲ್ಲವೆಂಬುದಕ್ಕೆ ಸಾಕ್ಷಿಯಾಗಿದೆ. ಆದರೆ, ಭಾರತೀಯ ಅರಸರು ಇತರ ರಾಷ್ಟ್ರಗಳಲ್ಲಿ ಸೇನಾಕ್ರಮಣದಿಂದ ಧರ್ಮ ಪ್ರಚಾರ ನಡೆಸಿದ ಪುರಾವೆಯಿಲ್ಲ. ಅಂತಹ ಘಟನೆಗಳನ್ನು ನೀವು ಓದಿದ್ದರೆ ಆ ಅರಸರ ವಿವರಗಳನ್ನು ಆಧಾರ ಸಹಿತ ತಿಳಿಸಿರಿ" ಎಂದು ವಿನಂತಿಸಿದ್ದೀರಿ.

ಶ್ರೀಮಾನ್ ಗುಪ್ತಾರವರೇ! ನಮ್ಮ ತಮಿಳ್ನಾಡಿನ ಅರಸರು ಕಡಲಾಚೆ ದಂಡೆತ್ತಿ ಹೋಗಿ ಧರ್ಮಪ್ರಚಾರ ನಡೆಸಿದ್ದಾರೆ. ಅವರು ಮಂದಿರ ಮತ್ತು ವಿಗ್ರಹಗಳ ಪ್ರತಿಷ್ಠಾನದಲ್ಲಿ ವಿಶೇಷ ಆಸಕ್ತಿ ತೋರಿದ್ದಾರೆ. ಆ ರಾಷ್ಟ್ರಗಳಲ್ಲಿಯೂ ಅವರು ಅದೇ ನೀತಿಯನ್ನು ಅವಲಂಬಿಸಿದರು. ಆದ್ದರಿಂದಲೇ ಅವರ ಛಾಯಾಚಿತ್ರಗಳಲ್ಲಿ ಶೈವ ಪಂಥವನ್ನು ಕಡಲಾಚೆ ಹಬ್ಬಿಸಿದವರೆಂದು ಉಲ್ಲೇಖಿಸಲಾಗಿದೆ. ಹಿಂದಿನ ಕಾಲದಲ್ಲಿ ಪುದುಕೋಟೆಯ ಅರಸು ಮನೆತನವು ಶ್ರೀಲಂಕಾವನ್ನು ಜಯಿಸಿ ಅಲ್ಲಿ ಹೊಸ ಕ್ಷೇತ್ರಗಳನ್ನು ಕಟ್ಟಿ ಶೈವ ಧರ್ಮವನ್ನು ಪ್ರಚಾರಮಾಡಿತ್ತು.

## ಕೊನೆಯ ಮಾತು

ಪ್ರಿಯ ಗುಪ್ತಾರವರೇ! ನೀವು ಪತ್ರದ ಕೊನೆಯಲ್ಲಿ ಬರೆದಿರುವ ಕೆಲವು ಮಾತುಗಳು ಹೃದಯ ಸ್ಪರ್ಶಿಯಾಗಿವೆ. ಪವಿತ್ರ ಗ್ರಂಥವನ್ನು ಸ್ವಧರ್ಮ ಗ್ರಂಥವೆಂದೇ ಭಾವಿಸಿ ಗೌರವಿಸುತ್ತೇನೆಂದು ಹೇಳಿ, ಪವಿತ್ರ ಕುರ್‌ಆನ್ ಮತ್ತು ಇಸ್ಲಾಮ್ ಧರ್ಮವನ್ನು ಯಾಕೆ ಪ್ರೀತಿಸುತ್ತಿರುವಿರೆಂದು ಹದಿನಾಲ್ಕು ಕಾರಣಗಳನ್ನು ಬರೆದಿದ್ದೀರಿ. ಬಹಳ ಸಂತೋಷ. ಆದರೆ ಹಾಗೆ ಹೇಳಿದ ಬಳಿಕ ವಾಚಕರಿಗೆ ಅರೋಚಕವೆನಿಸುವ ಮಾತುಗಳನ್ನು ಬರೆಯಬೇಡಿರಿ! ಎಂದು ಉಪದೇಶಿಸಿದ್ದೀರಿ.

ಅದನ್ನು ಓದಿದಾಗ, ನಾನು ಅಂತಹದ್ದೇನೂ ಬರೆದಿಲ್ಲವಲ್ಲಾ ಎಂದೆನಿಸಿತು. ಆದರೆ, ನೀವು ಸೂಚಿಸಿದ ಉದಾಹರಣೆಗಳನ್ನು ನೋಡಿದ ಬಳಿಕ ನನಗೆ ವಿಷಯ ತಿಳಿಯಿತು. "ನನ್ನ ಮನೆಯೇ ಇತರೆಲ್ಲ ಮನೆಗಳಿಗಿಂತ ಉತ್ತಮ. ನನ್ನ ದೇಶವೇ ಎಲ್ಲ ದೇಶಗಳಿಗಿಂತ ಶ್ರೇಷ್ಠ. ನನ್ನ ಧರ್ಮವೇ ಇತರ ಧರ್ಮಗಳಿಗಿಂತ ಉದಾತ್ತ" ಹೀಗೆ ಹೇಳಿದರೆ ಇತರರ ಹೃದಯಕ್ಕೆ ಘಾಸಿಯಾಗುವುದು. ಇತರರ ಮನಸ್ಸು ಉರಿಯುವುದು, ಅಸ್ವಸ್ಥವಾಗುವುದೆಂದು ಹೇಳಿದ್ದೀರಿ. ಇದು ನನ್ನನ್ನು ಮತ್ತಷ್ಟು ಅಚ್ಚರಿಗೊಳಿಸಿದೆ.

ನಿನ್ನ ಮನೆ ಹಾಳು, ನನ್ನ ಮನೆ ಉತ್ತಮ. ನಿನ್ನ ದೇಶ ಹಾಳು, ನನ್ನ ದೇಶ ಶ್ರೇಷ್ಠ. ನಿನ್ನ ಧರ್ಮ ಕೀಳು, ನನ್ನ ಧರ್ಮ ಮೇಲು ಎಂದು ಹೇಳುತ್ತಿದ್ದರೆ ಅದು ಮನನೋಯಿಸುವ ಸಾಧ್ಯತೆಯಿದೆ. ಇನ್ನೊಂದು ವಿಚಾರ: ನಾನು ಆ ಕೃತಿಯನ್ನು (ನನ್ನ ಪ್ರೀತಿಯ ಧರ್ಮ) ನಿಷ್ಪಕ್ಷ ಪಾತದಿಂದ ಬರೆದಿರುವಾಗ ಅರೋಚಕವೆನಿಸುವುದರಲ್ಲಿ ಹುರುಳಿದಿಯೇ? (1987 ಜೂನ್ 6ರಂದು ನಾನು ಇಸ್ಲಾಮ್ ಸ್ವೀಕರಿಸಿದೆ.)

ಇನ್ನೊಂದು ಗುಟ್ಟನ್ನು ಹೇಳಿಬಿಡುತ್ತೇನೆ. ಆ ಕೃತಿಯಲ್ಲಿ ವ್ಯಕ್ತಪಡಿಸಿದ್ದ ಅನೇಕ ಅಭಿಪ್ರಾಯಗಳನ್ನು ನಾನು ಮುಸ್ಲಿಮನಾದುದರಿಂದ ಅದೇ ಶೈಲಿಯಲ್ಲಿ ಹೇಳಲು ನನ್ನಿಂದಾಗುವುದಿಲ್ಲ. ಹಾಗೆ ಹೇಳುವುದನ್ನು ಇಸ್ಲಾಮ್ ತಡೆಯುತ್ತದೆ. ಇತರ ಧರ್ಮೀಯರ ಆರಾಧ್ಯ ವಸ್ತುಗಳನ್ನು ನಿಂದಿಸಬೇಡಿರಿ. ಅವರು ಅಲ್ಲಾಹನನ್ನು ನಿಂದಿಸಬಹುದು ಎಂದು ಇಸ್ಲಾಮ್ ಹೇಳುತ್ತದೆ. ಆದ್ದರಿಂದ ನೀವು ಸೂಚಿಸಿರುವಂತೆ ಇಸ್ಲಾಮಿನ ವೈಶಿಷ್ಟ್ಯಗಳನ್ನು ಗುರುತಿಸಿ, ಅದರ ಪ್ರಚಾರ ಸೇವೆಯಲ್ಲಿ ನನ್ನ ಉಳಿದ ಬಾಳನ್ನು ವ್ಯಯಿಸುವ ಅನುಗ್ರಹವನ್ನು ದೇವನು ಕರುಣಿಸಲೆಂದು ವಿನೀತವಾಗಿ ಆಶಿಸುತ್ತೇನೆ.

ಪ್ರೀತಿ ಪೂರ್ವಕ

ನಿಮ್ಮ ಅಬ್ದುಲ್ಲಾ ಅಡಿಯಾರ್

---

# ಪ್ರಶ್ನೋತ್ತರ

ಪ್ರಶ್ನೆ: ಇಸ್ಲಾಮ್ ಎಂದರೇನು?

ಉತ್ತರ: ಇಸ್ಲಾಮ್ ಎಂದರೆ ದೇವನಿಗೆ ಸಂಪೂರ್ಣ ಶರಣಾಗುವುದು. ಇಸ್ಲಾಮಿಗೆ ಶಾಂತಿ ಎಂಬ ಅರ್ಥವೂ ಇದೆ.

ಪ್ರಶ್ನೆ: ಇಸ್ಲಾಮ್ ಧರ್ಮದ ದೇವನು ಯಾರು?

ಉತ್ತರ: ಅಲ್ಲಾಹನು ಇಸ್ಲಾಮಿನ ಏಕೈಕ ದೇವನು. ಹಿಂದೂಗಳ ವಿಶ್ವಾಸದಂತೆ ಬ್ರಹ್ಮನು ಸೃಷ್ಟಿಸುತ್ತಾನೆ. ವಿಷ್ಣು ಪರಿಪಾಲಿಸುತ್ತಾನೆ. ಈಶ್ವರನು ಸಹಕರಿಸುತ್ತಾನೆ. ಅವರನ್ನು ತ್ರಿಮೂರ್ತಿಗಳೆಂದು ಕರೆಯುತ್ತಾರೆ.

ಆದರೆ, ಇಸ್ಲಾಮಿನಲ್ಲಿ ಸೃಷ್ಟಿ, ಪರಿಪಾಲನೆ ಮತ್ತು ಲಯಗಳಿಗೆ ಒಬ್ಬನೇ ದೇವನು. ಆತನೇ ಅಲ್ಲಾಹ್.

ಪ್ರಶ್ನೆ: ಹಿಂದೂ ಧರ್ಮದಲ್ಲಿರುವ ಶಿವ-ಪಾರ್ವತಿ, ವಿಷ್ಣು-ಲಕ್ಷ್ಮಿ, ಬ್ರಹ್ಮ-ಸರಸ್ವತಿಯರಂತಹ ದಾಂಪತ್ಯ ಕಲ್ಪನೆ ಇಸ್ಲಾಮಿನಲ್ಲಿದೆಯೆ?

ಉತ್ತರ: ಇಲ್ಲ. ಅಲ್ಲಾಹನಿಗೆ ಭಾಗೀದಾರರಿಲ್ಲ. ಪತ್ನಿಯರಿಲ್ಲ. ಸಂತಾನವಿಲ್ಲ. ದೇವನಿಗೆ ಮಕ್ಕಳು-ಮರಿಗಳನ್ನು ಸಂಕಲ್ಪಿಸುವುದೇ ತಪ್ಪು. ದೇವನು ಏಕಮಾತ್ರನು. ಆತನು ಸಂಗಾತಿಯ ಅಗತ್ಯವಿಲ್ಲದ ಮಹಾಶಕ್ತನೆಂದು ಇಸ್ಲಾಮ್ ಹೇಳುತ್ತದೆ.

ಪ್ರಶ್ನೆ: ಅಲ್ಲಾಹನಿಗೆ ರೂಪವಿದೆಯೇ? ಅವನ ವಿಗ್ರಹ ಅಥವಾ ಚಿತ್ರವಿದೆಯೇ?

ಉತ್ತರ: ಇಲ್ಲ. ಅಲ್ಲಾಹನಿಗೆ ಶಿಲೆ ಅಥವಾ ಚಿತ್ರಗಳಲ್ಲಿ ರೂಪಿಸಲಾಗದ ಅಸ್ತಿತ್ವವಿದೆ. ದೇವರನ್ನು ಶಿಲೆ ಅಥವಾ ಚಿತ್ರಗಳಲ್ಲಿ ರೂಪಿಸಿದವರು ಆತನನ್ನು ಕಂಡಿಲ್ಲ. ದೇವನನ್ನು ನೋಡದೆ ವಿಗ್ರಹ ಮತ್ತು ಚಿತ್ರಗಳನ್ನು ರಚಿಸಿ ಅದನ್ನು ದೇವನೆಂದು ವಾದಿಸುವುದನ್ನು ಇಸ್ಲಾಮ್ ನಿರಾಕರಿಸುತ್ತದೆ. ಅವುಗಳನ್ನು ಆರಾಧಿಸಬಾರದೆಂದು ಇಸ್ಲಾಮ್ ಕಲಿಸುತ್ತದೆ. ಶಿಲೆ, ಚಿತ್ರ ಮುಂತಾದುವುಗಳನ್ನು ದೇವರೆಂದು ಪೂಜಿಸುವುದನ್ನು ಇಸ್ಲಾಮ್ ಮಹಾಪಾಪವೆಂದು ಪರಿಗಣಿಸುತ್ತದೆ. ಕೊಲೆ, ದರೋಡೆ, ಸುಳ್ಳು, ವ್ಯಭಿಚಾರ ಇವೆಲ್ಲವೂ ಘೋರ ಪಾಪ. ಎಲ್ಲ ಪಾಪಗಳೂ ಕ್ಷಮ್ಯವಾಗಿವೆ. ಆದರೆ ವಿಗ್ರಹ ಮತ್ತು ಚಿತ್ರಗಳನ್ನು ಪೂಜಿಸುವುದು ಇಸ್ಲಾಮಿನಲ್ಲಿ ಅಕ್ಷಮ್ಯ ಪಾಪವಾಗಿದೆ. ಆದ್ದರಿಂದ ಅಂತಹ ಸ್ಥಳಗಳಲ್ಲಿ ನೈಜ ಮುಸ್ಲಿಮರು ಆರಾಧನೆಗಳನ್ನು ನಿರ್ವಹಿಸುವುದಿಲ್ಲ.

ಪ್ರಶ್ನೆ: ವಿಗ್ರಹ ಅಥವಾ ಚಿತ್ರವಿಲ್ಲದೇ ಏಕಾಗ್ರತೆಯಿಂದ ದೇವೋಪಾಸನೆ ಮಾಡಬಹುದೇ?

ಉತ್ತರ: ಅಲ್ಲಾಹನ ವಿಗ್ರಹ ಅಥವಾ ಚಿತ್ರವಿಲ್ಲದೆ ಜಗತ್ತಿನ ನೂರು ಕೋಟಿ ಮುಸ್ಲಿಮರು ದಿನಂಪ್ರತಿ ಐದು ಬಾರಿ ನಮಾಝ್ ಮಾಡುತ್ತಾರೆ. ಭಯ-ಭಕ್ತಿಯಿಂದ

ಸಾಷ್ಟಾಂಗವೆರಗುತ್ತಾರೆ. ಹಿಂದಿನ ಕಾಲದ ಅನೇಕ ಋಷಿಗಳು ವಿಗ್ರಹಗಳನ್ನು ಪ್ರತಿಷ್ಠಾಪಿಸದೆ ಏಕಾಂತವಾಗಿ ದೇವನನ್ನು ಧ್ಯಾನಿಸುತ್ತಿದ್ದರೆಂದು ನಾವು ಓದಿದ್ದೇವೆ. ಆದ್ದರಿಂದ ವಿಗ್ರಹ ಅಥವಾ ಚಿತ್ರಗಳು ಆರಾಧನೆಗೆ ಅನಿವಾರ್ಯವಲ್ಲ.

ಪ್ರಶ್ನೆ: ಮುಸ್ಲಿಮರು ಎದುರಿನ ಗೋಡೆಗೆ ಮುಖಮಾಡಿ ನಮಾಝ್ ಮಾಡುತ್ತಾರಲ್ಲವೇ?

ಉತ್ತರ: ಕಟ್ಟಡದೊಳಗೆ ನಮಾಝ್ ಮಾಡುವಾಗ ಎದುರಿನ ಗೋಡೆಗೆ ಮುಖಮಾಡಿ ನಮಾಝ್ ಮಾಡುವಂತೆ ಭಾಸವಾಗುತ್ತದೆ. ಮಕ್ಕಾದಲ್ಲಿರುವ ದೇವ ಭವನಕ್ಕೆ ಅಭಿಮುಖವಾಗಿ ನಮಾಝ್ ಮಾಡಲಾಗುತ್ತದೆ. ಬಯಲು ಭೂಮಿಯಲ್ಲಿ ಸಂಚರಿಸುತ್ತಿರುವಾಗ ನಮಾಝ್‌ನ ವೇಳೆಯಾದರೆ ಆ ಪರಿಸರದ ಶುದ್ಧವಿರುವ ಯಾವ ಜಾಗದಲ್ಲಿಯೂ ನಮಾಝ್ ಮಾಡಬಹುದು. ಕಡಲ ತೀರದಲ್ಲಿಯೂ ನಮಾಝ್ ಮಾಡಬಹುದು. ಅಲ್ಲಿ ಗೋಡೆಯಿದೆಯೇ? ಗೋಡೆಗೆ ಮುಖ ಮಾಡಬೇಕಾಗಿಲ್ಲ. ಮಕ್ಕಾದಲ್ಲಿರುವ ಕಅಬಾ ಭವನಕ್ಕೆ ಅಭಿಮುಖವಾಗಬೇಕು.

ಪ್ರಶ್ನೆ: ಮಕ್ಕಾದಲ್ಲಿರುವ ಆ ದೇವಭವನದಲ್ಲಿ ಅಲ್ಲಾಹನ ವಿಗ್ರಹ ಅಥವಾ ಚಿತ್ರವಿದೆಯೇ?

ಉತ್ತರ: ಇಲ್ಲ. ಆ ದೇವ ಭವನವನ್ನು ಪ್ರವಾದಿ ಇಬ್ರಾಹೀಮರು(ಅ) ಕಟ್ಟಿದರು. ಏಕದೇವೋಪಾಸನೆಗಾಗಿ ಕಟ್ಟಲಾದ ಆ ಭವನದಲ್ಲಿ ಅನಂತರದ ಕಾಲದಲ್ಲಿ ವಿಗ್ರಹ ಮತ್ತು ಚಿತ್ರಗಳನ್ನು ನೆಲೆಗೊಳಿಸಲಾಯಿತು. ಅವುಗಳನ್ನು ಪ್ರವಾದಿ ಮುಹಮ್ಮದ್‌ರು(ಸ) ನೀಗಿಸಿದರು.

ಪ್ರಶ್ನೆ: ಹಾಗಿದ್ದರೆ, 'ಈಶ್ವರ ಅಲ್ಲಾ ತೇರೇ ನಾಮ್' ಈಶ್ವರ ಮತ್ತು ಅಲ್ಲಾಹ್ ಇವೆರಡೂ ದೇವನ ನಾಮವೆಂಬ ದ್ವಿಪದಿಯನ್ನು ಮುಸ್ಲಿಮರು ಒಪ್ಪುವುದಿಲ್ಲವೇ?

ಉತ್ತರ: ಈಶ್ವರನಿಗೆ ರೂಪ ಕಲ್ಪಿಸಿದರೆ ಅದನ್ನು ಒಪ್ಪಲಾರರು.

ಪ್ರಶ್ನೆ: ರಾಮ್-ರಹೀಮ್(ರಾಮ ಮತ್ತು ರಹೀಮ) ಒಬ್ಬನೆಂದು ಅಂಗೀಕರಿಸಲಾರರೇ?

ಉತ್ತರ: ರಾಮನು ಮಾನವನಾಗಿ ಜನಿಸಿದ್ದರೆ, ರಹೀಮನೆಂಬ ಜನನ ಮರಣವಿಲ್ಲದ ಅಲ್ಲಾಹನಿಗೆ ಸಮಾನವಾಗುವುದಿಲ್ಲ. ಮಾನವನಾಗಿ ಹುಟ್ಟಿದ ಯಾರನ್ನೂ ಮುಸ್ಲಿಮರು ದೇವನೆಂದು ಅಂಗೀಕರಿಸುವುದಿಲ್ಲ. ದೇವನು ಮಾನವ ಅವತಾರ ತಾಳುವನೆಂಬ ವಿಶ್ವಾಸವನ್ನೂ ಇಸ್ಲಾಮ್ ನಿರಾಕರಿಸುತ್ತದೆ.

ಪ್ರಶ್ನೆ: ವಾದಕ್ಕೆ ತಕ್ಕಂತೆ ಹೇಳುವುದು ಮತ್ತು ಆಚರಿಸುವುದೇ ಇಸ್ಲಾಮೇನು?

ಉತ್ತರ: ಹಾಗೇನಿಲ್ಲ. ಮುಸ್ಲಿಮರು ಹೇಳುವುದೆಲ್ಲವೂ ಹಿಂದೂಗಳಿಗೆ ಹಾಗೆ ಭಾಸವಾಗಬಹುದು. ತದ್ವಿರುದ್ಧವೂ ಆಗಬಹುದು. ನಾಗರಕೋಯಿಲ್‌ನಲ್ಲಿ ನಿಂತು ನೋಡುವವರಿಗೆ ಮದರಾಸು ಉತ್ತರದ ಆಂಧ್ರ ಗಡಿಗೆ ತಾಗಿಕೊಂಡಿರುವ ಒಂದು ವಿದೂರ ಪ್ರದೇಶವೆಂದು ಭಾಸವಾಗುತ್ತದೆ. ಮದ್ರಾಸಿನಲ್ಲಿ ನಿಂತು ನೋಡುವವರಿಗೆ ನಾಗರಕೋಯಿಲ್ ದಕ್ಷಿಣದಲ್ಲಿ ಕೇರಳ ಗಡಿಗೆ ತಾಗಿರುವ ಪ್ರದೇಶವೆಂದೆನಿಸುತ್ತದೆ.

ಪ್ರಶ್ನೆ: ಇಸ್ಲಾಮ್ ಬೋಧಿಸುವ ಏಕದೇವ ಸಿದ್ಧಾಂತ ಸರಿಯೋ? ಅಥವಾ ಬಹುದೇವ ಸಿದ್ಧಾಂತವೋ?

ಉತ್ತರ: ಏಕದೇವ ಮತ್ತು ಬಹುದೇವ ವಾದಿಗಳ ನಡುವೆ ಸಂವಾದ ನಡೆದರೆ ಏಕದೇವವಾದಿಗಳೇ ಜಯ ಗಳಿಸುತ್ತಾರೆ. ಅನೇಕ ದೇವರಿರುವರೆಂದು ವಾದಿಸುವಾಗ ಆ ದೇವತೆಗಳಲ್ಲಿ ಯಾರು ಪ್ರಧಾನರೆಂಬ ಬಗ್ಗೆ ಭಿನ್ನಾಭಿಪ್ರಾಯ ತಲೆದೋರುತ್ತದೆ. ಪ್ರತಿಯೊಬ್ಬರೂ ತಂತಮ್ಮ ವಾದಗಳನ್ನು ಸಮರ್ಥಿಸಲಿಕ್ಕಾಗಿ ಕಥೆ ಹೆಣೆಯಬೇಕಾಗುತ್ತದೆ. ದೇವತೆಗಳ ಕಾಳಗಗಳ ಕಥೆಗಳನ್ನು ಇಲ್ಲಿ ಉದಾಹರಿಸಬಹುದು. ಇವು ಬಹುದೇವ ವಿಶ್ವಾಸದ ದೌರ್ಬಲ್ಯವನ್ನು ಎತ್ತಿ ತೋರಿಸುತ್ತದೆ. ಆದ್ದರಿಂದಲೇ ಹಿಂದೂ ಧರ್ಮದ ಕೆಲವು ಆಚಾರ್ಯರು 'ಪರಬ್ರಹ್ಮ'ನೆಂದೂ ಒಂದೇ ಕುಲ ಒಂದೇ ದೇವನೆಂದೂ ಪ್ರತಿಪಾದಿಸಿದ್ದರು.

ಪ್ರಶ್ನೆ: ಇಸ್ಲಾಮಿನಲ್ಲಿ ದೇವನ ಹೊರತು ಅನ್ಯರ ಆರಾಧನೆಯಿಲ್ಲವೇ? ಮಾನವನನ್ನು ಪೂಜನೀಯನೆಂದು ಹೇಳಬಹುದೇ?

ಉತ್ತರ: ಕೂಡದು! ಆರಾಧನೆಯು ಕೇವಲ ಅಲ್ಲಾಹನಿಗೆ ಸೇರಿದೆ. ಮಾನವ, ಆತ ಯಾರೇ ಆಗಿದ್ದರೂ ಆರಾಧನೆಗೆ ಅರ್ಹನಲ್ಲ.

ಪ್ರಶ್ನೆ: ಮಾನವರಲ್ಲಿ ಕೆಲವರನ್ನು ಸಾಕ್ಷಾತ್ ದೇವ, ಹೃದಯದೇವ, ಕುಲದೇವ, ನಟದೇವನೆಂದು ಕರೆಯಬಹುದೇ?

ಉತ್ತರ: ಅದು ತಪ್ಪು. ಮಾನವನು ಕೇವಲ ಮಾನವನೇ ಆಗಿದ್ದಾನೆ. ದೇವನು ದೇವನೇ. ಹುಟ್ಟಿ ಬದುಕಿ ಸಾಯುವ ಮಾನವನು ದೇವನಿಗೆ ಸಮಾನವಾಗುವುದಿಲ್ಲ.

ಪ್ರಶ್ನೆ: ಏಸುಕ್ರಿಸ್ತರು ದೇವರಲ್ಲವೇ? ಅವರು ದೇವಪುತ್ರರಲ್ಲವೇ?

ಉತ್ತರ: ಅಲ್ಲ, ಏಸು ದೇವರೆಂದು ಬೈಬಲ್‌ನಲ್ಲಿ ಎಲ್ಲೂ ಹೇಳಿಲ್ಲ. "ನನ್ನ ದೇವನೂ ನಿಮ್ಮ ದೇವನೂ ಆಗಿರುವ ಏಕದೇವನಿಗೆ ಶರಣಾಗಿರಿ" ಎಂದು ಸ್ವಯಂ ಏಸು ಹೇಳಿದ್ದಾರೆ. ದೇವನಿಗೆ ಮಕ್ಕಳು ಅಥವಾ ಸಂತಾನವಿಲ್ಲವೆಂದು ಇಸ್ಲಾಮ್ ಸ್ಪಷ್ಟವಾಗಿ ಹೇಳುತ್ತದೆ. ಅಂತೆಯೇ ಏಸು ದೇವಪುತ್ರರಲ್ಲವೆಂದೂ ಅದು ಒತ್ತಿ ಹೇಳಿದೆ. ಏಸು ದೇವ ಪ್ರವಾದಿಯಾಗಿದ್ದಾರೆ. ಅವರನ್ನು ಹಡೆದ ಮರ್ಯಮರು ಸೌಭಾಗ್ಯವತಿ. ಆದರೆ ದೇವ ಮಾತೆಯಲ್ಲ. ಇದು ಇಸ್ಲಾಮಿನ ದೃಢ ವಿಶ್ವಾಸವಾಗಿದೆ.

ಪ್ರಶ್ನೆ: ಕೊನೆಯದಾಗಿ, ದೇವನ ಕುರಿತು ಇಸ್ಲಾಮ್ ಏನು ಹೇಳುತ್ತದೆ?

ಉತ್ತರ: ದೇವನು ಏಕನೆಂಬ ಬುನಾದಿಯಲ್ಲಿ ಇಸ್ಲಾಮ್ ಅಚಲವಾಗಿದೆ. ದೇವನಿಗೆ ಸಂಗಾತಿಗಳು, ಪತ್ನಿಯರು, ತಾಯಿ ಮುಂತಾದ ಕಲ್ಪನೆಯನ್ನು ಇಸ್ಲಾಮ್ ನಿರಾಕರಿಸುತ್ತದೆ. ದೇವನ ಅವತಾರ, ದೇವಪುತ್ರರು ಇತ್ಯಾದಿ ಕಲ್ಪನೆಯನ್ನೂ ಅದು ಅಂಗೀಕರಿಸುವುದಿಲ್ಲ. ಇಸ್ಲಾಮಿನ ದೃಷ್ಟಿಯಲ್ಲಿ ವಿಗ್ರಹಾರಾಧನೆ ಅಕ್ಷಮ್ಯ ಅಪರಾಧ. ಏಕನಾದ, ಜತೆ ಅಥವಾ ಸಂಗಾತಿಯಿಲ್ಲದ, ಐಕ್ಯಕನಾದ ಸರ್ವಶಕ್ತ ದೇವನನ್ನು ಐದು ಬಾರಿ ಪ್ರಾರ್ಥಿಸಿ(ನಮಾಝ್ ನಿರ್ವಹಿಸಿ)ರೆಂದು ಇಸ್ಲಾಮ್ ಆಜ್ಞಾಪಿಸುತ್ತದೆ. ಇಸ್ಲಾಮಿನ ದೇವ ಕಲ್ಪನೆಯಲ್ಲಿ ಗಾಂಭೀರ್ಯ ಮತ್ತು ನೈರ್ಮಲ್ಯ ಎದ್ದು ತೋರುತ್ತದೆ.

----

# ನೆರೆಮನೆ

## ಮುಸ್ಲಿಮರೊಂದಿಗೆ ಸ್ನೇಹ-ಸಹವಾಸ

ತಮಿಳ್ನಾಡಿನ ಕೊಯಮುತ್ತೂರು ಜಿಲ್ಲೆಯ ತಿರುಪ್ಪೂರಿನ ಕೊಟ್ಟೈಕಾಡ್‌ನಲ್ಲಿ ಮುಸ್ಲಿಮರು ಗಣನೀಯ ಸಂಖ್ಯೆಯಲ್ಲಿದ್ದಾರೆ. ನಾನು ಅಲ್ಲಿ ಹುಟ್ಟಿದ್ದರಿಂದ ನನಗೆ ಇಸ್ಲಾಮಿ ಜ್ಞಾನ ದೊರೆಯಿತೆನ್ನುವಂತಿಲ್ಲ. ಹುಟ್ಟು ಅಥವಾ ಹುಟ್ಟೂರಿನಿಂದಾಗಿ ಇಸ್ಲಾಮಿ ಜ್ಞಾನ ಲಭಿಸುವುದಿಲ್ಲ. ಬಾಲ್ಯದಲ್ಲಿ ದುಂಡಗಿದ್ದ ನನ್ನನ್ನು ನೆರೆಮನೆಯ ಮುಸ್ಲಿಮ್ ತಾಯಂದಿರು ಎತ್ತಿ ಮುದ್ದಾಡುತ್ತಿದ್ದರು. ವಿಶೇಷತಃ ಕಡಲೆ ಸಾಹೇಬರ ಪತ್ನಿಯು ನನ್ನನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಅವರ ಮಡಿಲಲ್ಲಿಯೇ ನಾನು ಬೆಳೆದೆನೆಂದರೂ ಅತಿಶಯೋಕ್ತಿಯಾಗಲಾರದು. ಈ ಪ್ರೀತಿಯಿಂದ ನನಗೆ ಇಸ್ಲಾಮಿ ಜ್ಞಾನ ದೊರೆತಿಲ್ಲ. ಏಕೆಂದರೆ ಕೇವಲ ಪ್ರೀತಿಯಿಂದ ಇಸ್ಲಾಮಿ ಪ್ರಜ್ಞೆ ಬೆಳೆಯಲಾರದು.

ಪ್ರಾಥಮಿಕ ಶಾಲೆಯಲ್ಲಿ ನನ್ನ ಮಿತ್ರರಲ್ಲಿ ಮುಸ್ಲಿಮರೇ ಅಧಿಕವಿದ್ದರು. ಅವರ ಸ್ನೇಹ ಸೌಹಾರ್ದವು ನನ್ನ ಮನದಲ್ಲಿ ಇಂದಿಗೂ ಹಚ್ಚ ಹಸುರಾಗಿದೆ. ಅದೊಂದು ದಿನ ಆಡುತ್ತಿದ್ದಾಗ ಕಾಲೆಡವಿ ಉಗುರು ಕಿತ್ತು ರಕ್ತ ಸುರಿಯಿತು. ಅದನ್ನು ಕಂಡ ಅಹ್ಮದ್ ಎಂಬ ಬಾಲಕ ಅತ್ತು ಬಿಟ್ಟನು. ಒಂದು ಲುಂಗಿ ಮತ್ತು ಟೋಪಿ ಧರಿಸಿದ ಆತ ಅಳುತ್ತಿದ್ದ ದೃಶ್ಯವು ಇಂದಿಗೂ ನನ್ನ ಕಣ್ಣ ಮುಂದೆ ಗೋಚರಿಸುತ್ತಿದೆ. ಈ ಪ್ರಕರಣವು ಓರ್ವ ಬಾಲ ಮಿತ್ರನ ಮುಗ್ಧ ಪ್ರೀತಿ ,ವಾತ್ಸಲ್ಯವೆಂಬ ನೆಲೆಯಲ್ಲಿ ನನ್ನ ಮನಮುಟ್ಟಿತೇ ವಿನಾ ಇಸ್ಲಾಮನ್ನು ಕಲಿಯುವ ಜಿಜ್ಞಾಸೆ ಮೂಡಿಸಲಿಲ್ಲ. ಕೇವಲ ಮುಗ್ಧ ಪ್ರೇಮಭಾವನೆಯಿಂದ ಇಸ್ಲಾಮಿ ಪ್ರಜ್ಞೆ ಬೆಳೆಯುವುದಿಲ್ಲ. ಶಾಲಾ ಕಾಲೇಜುಗಳಲ್ಲಿಯೂ ಮುಸ್ಲಿಮರೇ ನನ್ನ ಮಿತ್ರರಾಗಿದ್ದರು. ಅವರ ಆತ್ಮೀಯ ಸ್ನೇಹದ ಸವಿನೆನಪನ್ನು ನನ್ನ ಮನಸ್ಸು ಈಗಲೂ ಮೆಲುಕು ಹಾಕುತ್ತಿದೆ. ಹಾಗಿದ್ದರೂ, ಅದು ನನ್ನಲ್ಲಿ ಇಸ್ಲಾಮಿ ಆಸಕ್ತಿಯನ್ನು ಬೆಳೆಸಲಿಲ್ಲ. ವಿದ್ಯಾರ್ಥಿ ಜೀವನದ ಬಳಿಕ ನಾನು ರಾಜಕೀಯ ಜೀವನ ಆರಂಭಿಸಿದೆ. ಕಾಯಿದೆ ಮಿಲ್ಲತ್ ಇಸ್ಮಾಈಲ್ ಸಾಹೆಬ್, ಸಿರಾಜುಲ್ ಮಿಲ್ಲತ್ ಏ.ಕೆ. ಅಬ್ದುಸ್ಸಮದ್ ಸಾಹೆಬ್ ಮುಂತಾದ ಮುಸ್ಲಿಮ್ ನಾಯಕರ ಪರಿಚಯವಾಯಿತು. ಅವರ ಸಭ್ಯ ರಾಜಕೀಯ ಧೋರಣೆ ಮತ್ತು ಅವರ ತಮಿಳು ಭಾಷಾ ಪ್ರೇಮವು ನನ್ನನ್ನು ನಿಬ್ಬೆರಗಾಗಿಸಿತು. ಹಾಗಿದ್ದರೂ ಅವರ ಸ್ನೇಹ ಸಹವಾಸವು ನನ್ನನ್ನು ಇಸ್ಲಾಮಿನ ಅಧ್ಯಯನಕ್ಕೆ ಪ್ರೇರೇಪಿಸಲಿಲ್ಲ. ನನ್ನ ಗ್ರಂಥಭಂಡಾರದಲ್ಲಿ ಕೆಲವು ಇಸ್ಲಾಮಿ ಸಾಹಿತ್ಯಗಳು ಇದ್ದುವು. ಆದರೆ, ಅವುಗಳನ್ನು ಒಮ್ಮೆ ಮಗುಚಿ ನೋಡಿದ್ದರಾಯಿತು. ಆಮೇಲೆ ಅದನ್ನು ಮುಟ್ಟಿಯೂ ನೋಡುತ್ತಿರಲಿಲ್ಲ!

ನಾನು ಪವಿತ್ರ ಕುರ್‌ಆನನ್ನು ಅರ್ಥವಾಗದ ಬಿಡಿ ಮಾತುಗಳ ಸಮಾಹಾರವೆಂದೇ ಭಾವಿಸಿದ್ದೆ. ಅದರಲ್ಲಿ ಬೈಬಲ್‌ನಂತೆ ನೀಳ್ಗತೆಗಳಿರಲಿಲ್ಲ. ಅದು ಹಿಂದೂ ಧರ್ಮದ ದೇವ ಕೀರ್ತನೆಗಳಂತೆಯೂ ಇರಲಿಲ್ಲ. ಭಗವದ್ಗೀತೆಯಂತೆ ಆಧ್ಯಾತ್ಮಿಕ ವಿಮರ್ಶೆಯೂ ಆಗಿರಲಿಲ್ಲ. ಆದರೂ ಆ ಗ್ರಂಥದ ಬಗ್ಗೆ ನನಗೆ ಪವಿತ್ರ ಭಾವನೆಯಿತ್ತು.

## ತಂದೆಯ ಸಂಧ್ಯಾ ಕೂಟಗಳು

ನನ್ನ ತಂದೆ ಓರ್ವ ಕಮ್ಯೂನಿಸ್ಟ್ ಉಗ್ರವಾದಿಯಾಗಿದ್ದರು. ಅವರು ಧರ್ಮ ಮತ್ತು ವೇದಗಳನ್ನು ಉಗ್ರವಾಗಿ ಖಂಡಿಸುತ್ತಿದ್ದರು. ವಿಶೇಷತಃ ಇಸ್ಲಾಮೆಂದರೆ ಕಿಡಿಕಾರುತ್ತಿದ್ದರು. ತಂದೆಯ ಸಂಧ್ಯಾ ಕೂಟಗಳಲ್ಲಿ ನಾನು ಚಾ ಸಪ್ಲೈ ಮಾಡುವ ಹುಡುಗನಾಗಿದ್ದೆ. ಕೆಲವೊಮ್ಮೆ ಮುಸ್ಲಿಮರೂ ಆ ಸಭೆಗಳಲ್ಲಿ ಭಾಗವಹಿಸುತ್ತಿದ್ದರು. ಅವರು ತಂದೆಯ ಉಗ್ರ ಟೀಕೆಗಳನ್ನು ಆಲಿಸಿ, ಅವುಗಳಿಗೆ ಸಮರ್ಪಕವಾದ ಉತ್ತರ ನೀಡುತ್ತಿದ್ದರು. ಆದರೂ ತಂದೆಯವರು ತುಚ್ಛೀಕರಿಸಿ ತೆಗಳುತ್ತಿದ್ದರು.

ಅಂತಹ ವಾತಾವರಣದಲ್ಲಿ, ಓರ್ವ ಕಮ್ಯೂನಿಸ್ಟನ ಮಗನಾಗಿದ್ದರೂ ನಾನು ಇಸ್ಲಾಮ್ ಧರ್ಮವನ್ನು ಅನಾದರಿಸಲಿಲ್ಲ. ರಾಜಕೀಯ ರಂಗದಲ್ಲಿ ನಾನು ವಿಚಾರವಾದಿಯಾಗಿದ್ದೆ. ವಿಚಾರವಾದಿಗಳಾಗಿದ್ದ ನನ್ನ ರಾಜಕೀಯ ನಾಯಕರು ಧರ್ಮ ಮತ್ತು ವೇದಗಳನ್ನು ನಿಂದಿಸು ತ್ತಿದ್ದರು. ಆದರೂ, ಇಸ್ಲಾಮಿನ ಬಗ್ಗೆ ನನ್ನಲ್ಲಿ ನಿಂದನಾ ಭಾವನೆ ಬೆಳೆಯಲಿಲ್ಲ. ನಮ್ಮ ಸಂಘಟನೆಗಳು ಮುಸ್ಲಿಮ್ ಲೀಗ್ ನಾಯಕರನ್ನು ಕಟುವಾಗಿ ಟೀಕಿಸುತ್ತಿದ್ದುವು. ನಾನು ಅದರಲ್ಲಿ ಭಾಗಿಯಾಗಿದ್ದೆ. ಹಾಗೆಯೇ ನಮ್ಮಲ್ಲಿ ಅನೇಕ ಮಂದಿ ಇಸ್ಲಾಮ್ ಧರ್ಮವನ್ನು ಖಂಡಿಸುತ್ತಿದ್ದರು. ಆದರೆ, ನಾನು ಲೀಗ್ ನಾಯಕರನ್ನು ಟೀಕಿಸುತ್ತಿದ್ದೆನೇ ಹೊರತು ಇಸ್ಲಾಮ್ ಧರ್ಮವನ್ನು ಟೀಕಿಸುತ್ತಿರಲಿಲ್ಲ. ನಾನು ಇಸ್ಲಾಮ್ ಧರ್ಮವನ್ನು ಅರಿತಿದ್ದುದರಿಂದ ಆ ನೀತಿ ಅವಲಂಬಿಸಿದ್ದಲ್ಲ. ಅಂದು ನನಗೆ ಇಸ್ಲಾಮಿನ ಬಗ್ಗೆ ಸಾಕಷ್ಟು ತಿಳಿದಿರಲಿಲ್ಲ. ರಾಜಕೀಯ ರಂಗದಲ್ಲಿ ಮುಳುಗಿದ್ದ ನನ್ನನ್ನು ಇಸ್ಲಾಮ್ ಹೇಗೆ ಆಕರ್ಷಿಸಿತು? ಈ ಪ್ರಶ್ನೆಗೆ ಸೆರೆಮನೆಯೇ ಉತ್ತರ ನೀಡುತ್ತದೆ.

## ಸೆರೆಮನೆಯಲ್ಲಿ

1976ರಲ್ಲಿ ತಮಿಳ್ನಾಡಿನಲ್ಲಿ ಡಿ.ಎಂ.ಕೆ. ಸರಕಾರವನ್ನು ವಿಸರ್ಜಿಸಲಾಯಿತು. ಮೀಸಾದನ್ವಯ ನನ್ನನ್ನು ಬಂಧಿಸಿ ಸೆರೆಮನೆಗೆ ಸೇರಿಸಿದರು. ಸೆರೆಮನೆಯ ಅಧಿಕಾರಿಗಳು ಪೂರ್ವಗ್ರಹ ದ್ವೇಷದಿಂದ ಕೈದಿಗಳನ್ನು ಕ್ರೂರವಾಗಿ ಮರ್ದಿಸುತ್ತಿದ್ದರು. ಅವರು ನನ್ನನ್ನೂ ಚೆನ್ನಾಗಿಯೇ ಪುರಸ್ಕರಿಸಿದರು! ಅವರ ಹಿಂಸೆ-ದೌರ್ಜನ್ಯಗಳು ನನ್ನ ಮಜ್ಜೆ ಮಾಂಸ, ಎಲುಬುಗಳನ್ನು ನಾದಿದ ಆವೆ ಮಣ್ಣಿನಂತೆ ಮಾಡಿತು. ನಾನು ಕತ್ತಲೆ ಕವಿದು ಮರಣ ಕೂಪಕ್ಕೆ ಜಾರುತ್ತಿದ್ದೆ. ತಲೆ ನರೆಯುವುದಕ್ಕಿಂತ ಮುಂಚೆಯೇ ನನ್ನ ಅಂತ್ಯವಿಧಿ ಕಣ್ಣ ಮುಂದೆ ನಲಿದಾಡಿತು. ಇದು ಕೊನೆಯ ದೃಶ್ಯ! ಇದೇ ಕೊನೆಯ ಉಸಿರೆಂದು ನನ್ನನ್ನು ತಲ್ಲಣಗೊಳಿಸಿದ ಕ್ಷಣಗಳು ದಾಟಿ ಹೋದವು!

ತರುವಾಯ ಆಹಾರ, ಬಟ್ಟೆ, ಬರೆ, ವಾಚನ ಸೌಲಭ್ಯ ಎಲ್ಲವೂ ದೊರೆಯಲಾರಂಭಿಸಿತು. ಹೌದು, 30 ದಿನಗಳ ಕ್ರೂರ ಹಿಂಸೆಯ ಬಳಿಕ ಸ್ವಲ್ಪ ಸೌಲಭ್ಯಗಳು ದೊರೆತುವು. ಆದರೆ, ನನ್ನ ಹೃದಯದ ಗಾಯವು ವಾಸಿಯಾಗಲಿಲ್ಲ. ತಲೆಬುರುಡೆಯೊಳಗೆ ಸಹಸ್ರಾರು ಕೀಟಗಳು ಕೊರೆಯುತ್ತಿರುವಂತಹ ಅಸಹ್ಯ ನೋವು! ನನ್ನ ಕೊರಳಿಗೆ ನೇಣು ಬಿಗಿಯುವುದಷ್ಟೇ ಬಾಕಿಯಿತ್ತು. ಸಾವಿರಾರು ಮಂದಿ ನನ್ನನ್ನು ಥಳಿಸುತ್ತಿರುವ ದೃಶ್ಯವು ನನ್ನ ಸುಪ್ತ ಮನಸ್ಸನ್ನು ಪದೇ ಪದೇ ಬೆಚ್ಚಿಸುತ್ತಿತ್ತು. ಬೆಳದಿಂಗಳ ರಾತ್ರಿ ಕಣ್ಣು ಮುಚ್ಚಿ ಮಲಗಿದರೆ ಸಹಸ್ರಾರು ಮಂದಿಯ ಹೊಡೆತವು ಮನದಲ್ಲಿ ಭೀಕರ ನಾದದಿಂದ ಮಾರ್ದನಿಸುತ್ತಿತ್ತು. ನಾನು ಕೈಕಾಲು ಬಡಿದು ಆರ್ತನಾದ ಮಾಡುತ್ತಿದ್ದೆ. ಬಾಯಿಯಿಂದ ಒಂದು ರೀತಿಯ ಜೊಲ್ಲು ಸುರಿಯುತ್ತಿತ್ತು. ನಾಲಗೆ ಕಚ್ಚುವುದರಿಂದ ಕೆಂಪು ಬಿಳಿ ಮಿಶ್ರಿತ ನೊರೆಯೂ ಒಸರುತ್ತಿತ್ತು! ಓಹೋ! ಆ ದಿನಗಳಲ್ಲಿ ಚಂದ್ರನ ಬೆಳದಿಂಗಳೂ ಕೂಡಾ ಕ್ರೌರ್ಯದಿಂದ ಕೂಡಿತ್ತು!

## ವೇದ ಪಾರಾಯಣ

ಹೀಗೆ ನೋವಿನಿಂದ ನರಳುತ್ತಿದ್ದ ನನ್ನ ಮನಸ್ಸು ವೇದಗಳತ್ತ ತಿರುಗಿತ್ತು. ಮರಣ ಭೀತಿಯ ಸುಳಿಯಲ್ಲಿ ಎಲ್ಲ ಧರ್ಮ ಗ್ರಂಥಗಳನ್ನೂ ಓದತೊಡಗಿದೆ. ಕೆಲವು ವೇದಗಳು; ಇದು ಮಾಯಾಲೋಕ, ಇದನ್ನು ತೊರೆಯಬೇಕೆಂದು ಹೇಳಿದುವು. ಆ ಉಪದೇಶವು ನನ್ನ ಗಾಯಗೊಂಡ ಮನಸ್ಸಿಗೆ ಚುಚ್ಚುವ ಚಿಕಿತ್ಸೆ ಮಾಡಿದವು. ಕೆಲವು ವೇದಗಳ ವಾಕ್ಯಗಳು ವಿದೇಶಿ ಉತ್ಸವಗಳಲ್ಲಿ ಭೇಟಿಯಾಗುವ ಅಪರಿಚಿತರಂತಿದ್ದುವು. ನಮಗೆ ಅವರ ಮುಖ ಪರಿಚಯವಿಲ್ಲ. ಅವರ ಅಂತರಂಗವೂ ತಿಳಿದಿಲ್ಲ. ನಮ್ಮ ಹೃದಯ ವೇದನೆಯೂ ಆ ವಾಕ್ಯಗಳಿಗೆ ಅರ್ಥವಾಗುವುದಿಲ್ಲ. ಇನ್ನು ಕೆಲವು ಕೇವಲ ಓರ್ವನನ್ನು ಹಾಡಿ ಹೊಗಳಿ, ಇತರ ಎಲ್ಲರನ್ನು ಪಾಪಿಗಳೆಂದು ಆರೋಪಿಸುತ್ತಿದ್ದುವು. ನಾನು ಪಾಪಿಯೇ? ಇದು ಗಾಯದ ಮೇಲೆ ಇನ್ನೊಂದು ಬರೆಯಾಯಿತು. ಆದರೆ, ಒಂದು ವೇದಗ್ರಂಥ ಮಾತ್ರ ನಾನು ಯಾರೆಂದು ತೋರಿಸಿಕೊಟ್ಟಿತು.

"ನಾನು ವೇದ ಗ್ರಂಥ."

"ಹೌದೇ?"

"ನಿಸ್ಸಂದೇಹ."

"ಮುಂದೇನು ಮಾಡಬೇಕು?"

"ಭಯಭಕ್ತಿ ಬೆಳೆಸಿಕೊಳ್ಳಿರಿ."

"ಯಾರ ಬಗ್ಗೆ? ಸೆರೆಮನೆಯಲ್ಲಿ ನೋಯಿಸಿ ವಿವಶಗೊಳಿಸಿ ಬೆವರಿಸುತ್ತಿರುವವರಲ್ಲಿಯೋ?"

"ಅಲ್ಲ, ನಿನ್ನನ್ನೂ ಸಕಲ ಚರಾಚರಗಳನ್ನೂ ಸೃಷ್ಟಿಸಿ ಪರಿಪಾಲಿಸುತ್ತಿರುವ ದೇವನಲ್ಲಿ ಭಯಭಕ್ತಿ ತೋರಿರಿ."

"ಸರಿ, ಹಾಗೆ ಭಯಭಕ್ತಿ ತೋರಿದರೆ ಏನು ಸಿಗುವುದು?"

"ಸನ್ಮಾರ್ಗದರ್ಶನ ಲಭ್ಯವಾಗುವುದು."

ಹೀಗೆ ಆಶ್ವಾಸನೆ ನೀಡಿದ ವೇದ ಗ್ರಂಥ ಯಾವುದು? ಅದುವೇ ಪವಿತ್ರ ಕುರ್‌ಆನ್!

"ಇದು ದೈವಿಕಗ್ರಂಥ, ಸಂದೇಹವಿಲ್ಲ. ಇದು ಭಯಭಕ್ತಿಯುಳ್ಳವರಿಗೆ ಮಾರ್ಗದರ್ಶಕ" ಎಂದು ಪವಿತ್ರ ಕುರ್‌ಆನ್ ಹೇಳುತ್ತದೆ.

## ವಿವಾಹ ಉಡುಗೊರೆ

1962ರಲ್ಲಿ ನನಗೆ ವಿವಾಹವಾಯಿತು. ಅಂದು ನಾನು ಹಿಂದೂವಾಗಿದ್ದೆ. ಪತ್ನಿ ಕ್ರೈಸ್ತಳು. ಮುಸ್ಲಿಮ್ ಕವಿ ಟಿ.ಕಾಸಿಮ್‌ರವರು ನನಗೆ ವಿವಾಹ ಉಡುಗೊರೆಯಾಗಿ ಪ್ರವಾದಿ ನಾಯಕ ಎಂಬ ಚರಿತ್ರೆ ಗ್ರಂಥವನ್ನು ನೀಡಿದ್ದರು. "ಈ ವಿವಾಹ ಉಡುಗೊರೆಯು ನಿಮಗೆ ಉಪಯುಕ್ತವಾಗಲಿ" ಎಂಬ ಹಾರೈಕೆಯ ಮಾತನ್ನೂ ಅದರಲ್ಲಿ ಅವರು ಉಲ್ಲೇಖಿಸಿದ್ದರು. ಅವರು ಹಾಗೇಕೆ ಬರೆದಿರುವರೆಂದು ಆಗ ನಾನು ಯೋಚಿಸಿರಲಿಲ್ಲ. ಸೆರೆಮನೆಯಲ್ಲಿ ಆ ಗ್ರಂಥ ನನ್ನ ಉಪಯೋಗಕ್ಕೆ ಬಂತು. ತನ್ಮೂಲಕ ನಾನು ಪ್ರವಾದಿ ಚರಿತ್ರೆಯ ಗಾಢ ಅಧ್ಯಯನ ನಡೆಸಿದೆ. ಆಗ ಒಂದು ವಿಚಿತ್ರ ಪ್ರಶ್ನೆಯು ನನ್ನ ಮನದಲ್ಲಿ ಟಿಸಿಲೊಡೆಯಿತು. ಇದೇನು? ಪುನಃ ಪವಿತ್ರ ಕುರ್‌ಆನನ್ನು ಓದಿದಂತಾಗುತ್ತಿದೆಯಲ್ಲಾ? ದೇವ ವಚನಗಳಿಗೂ ಓರ್ವ ವ್ಯಕ್ತಿಯ ಜೀವನಕ್ಕೂ ಇಷ್ಟೊಂದು ಏಕರೂಪತೆ ಹೇಗೆ ಬಂತು? ಪವಿತ್ರ ಕುರ್‌ಆನ್ ಮೂಲವೂ ಪ್ರವಾದಿ ಜೀವನವು ಅದರ ಪಡಿಯಚ್ಚೂ ಆಗಿದೆಯೇ? ಪ್ರವಾದಿವರ್ಯರ(ಸ) ಜೀವನವು ಪವಿತ್ರ ಕುರ್‌ಆನಿನ ವ್ಯಾಖ್ಯಾನವೆಂಬ ಮಾತು ಎಷ್ಟೊಂದು ಅನ್ವರ್ಥ!

ಸೆರೆಮನೆಯ ಪ್ರಭಾತವು ಅತಿ ವಿಚಿತ್ರವಾಗಿದೆ. ಸೂರ್ಯೋದಯವಾಗಿರಲಿ, ಇಲ್ಲದಿರಲಿ; ಮಳೆ ಬರಲಿ ಅಥವಾ ಮಂಜು ಬೀಳಲಿ; ಕ್ಲಪ್ತವಾಗಿ ಆರು ಗಂಟೆಗೆ ಸೆರೆಮನೆಯ ಬಾಗಿಲು ದಢಾರನೆ ತೆರೆಯಲ್ಪಡುತ್ತದೆ. ಅದು ಸೆರೆಮನೆ ವಾಸಿಗಳಿಗೆ ಸ್ವಾತಂತ್ರ್ಯದ ಘಂಟಾನಾದವಾಗಿದೆ. ಕೆಲವರು ಓಡುತ್ತಾರೆ, ಕೆಲವರು ಆಡುತ್ತಾರೆ, ಕೆಲವರು ಹಾಡುತ್ತಾರೆ, ಕೆಲವರು ಮೆಲ್ಲನೆ ಹೊರಗೆ ಇಣುಕುತ್ತಾರೆ, ಕೆಲವರು ಒಳಗೆಯೇ ಕುಳಿತು ಆಲೋಚನಾ ಲಹರಿಯಲ್ಲಿ ಸ್ವಾತಂತ್ರ್ಯದ ಕನಸು ಕಾಣುತ್ತಾರೆ. ಅವರಂತೆಯೇ ಕಾಲ ಕಳೆಯುತ್ತಿದ್ದ ನನ್ನನ್ನು ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ಚರಿತ್ರೆಯು ಸಂಪೂರ್ಣ ಬದಲಾಯಿಸಿ ಬಿಟ್ಟಿತು. ಕೈಕಾಲು ಮುಖ ತೊಳೆದು ಗ್ರಂಥ ತೆರೆದು ಓದಲು ಕುಳಿತುಕೊಳ್ಳುತ್ತಿದ್ದೆ. ಮಣ್ಣಿನಡಿಯ ಜ್ಞಾನ ಬೀಜದಲ್ಲಿ ಬಿಳಿ ಚಿಗುರು ಹುಟ್ಟುವುದನ್ನು ಗುರುತಿಸಿದೆ. ಆ ತನಕ ನನ್ನ ಅರಿವಿಗೆ ಬಾರದಂತಹ ಅದ್ಭುತ ವಿಷಯ ಅದರಲ್ಲಿ ಏನಿತ್ತು?

---

# ಆಕರ್ಷಕ ಚರಿತ್ರೆ

ವಿಚಾರವಾದಿಗಳ ಪಂಜರದಲ್ಲಿ ನವಿಲಿನಂತೆ ಕುಣಿಯುತ್ತಿದ್ದ ನನ್ನ ಅಂತರಂಗದಲ್ಲಿ ಇಸ್ಲಾಮಿನ ವಿಚಾರವಾದವು ಕೋಕಿಲ ನಾದವನ್ನು ಮೊಳಗಿಸಿತು. (ಇಸ್ಲಾಮಿನಲ್ಲಿ ವಿಚಾರ ವಾದಕ್ಕಿಂತ ಮಿಗಿಲಾದ ಕೆಲವು ವಾಸ್ತವಿಕತೆಗಳಿವೆಯೆಂದು ಕ್ರಮೇಣ ನನಗೆ ಮನವರಿಕೆಯಾಯಿತು) ಪ್ರವಾದಿವರ್ಯರ(ಸ) ಚರಿತ್ರೆಯಲ್ಲಿರುವ ಘಟನಾವಳಿಗಳು ಮಾಯಮಂತ್ರ ಪುರಾಣವಲ್ಲ. ಯಾವ ಮಾನವನೂ ಮೈಗೂಡಿಸಬಹುದಾದ ಚರ್ಯೆಗಳೆಂದು ನಾನು ಕಂಡುಕೊಂಡೆ. ಪ್ರವಾದಿವರ್ಯರು(ಸ) ಮಾತೆಯ ಗರ್ಭದಲ್ಲಿರುವಾಗಲೇ ತಂದೆ ತೀರಿಕೊಂಡರು. ಹುಟ್ಟಿದ ಬಳಿಕ ತಾಯಿಯನ್ನೂ ಕಳೆದುಕೊಂಡರು. ಅನಂತರ ಪೋಷಕರಾಗಿದ್ದ ಪಿತಾಮಹರೂ ಕಣ್ಮರೆಯಾದರು. ಹೀಗೆ ಸಂಕಷ್ಟಗಳ ಪ್ರತೀಕವಾಗಿ ಚಿಕ್ಕಂದಿನಲ್ಲಿಯೇ ಅನಾಥರಾಗಿ ಬೆಳೆದ ಅವರ ಚರಿತ್ರೆಯು ನನ್ನನ್ನು ಸಂಪೂರ್ಣವಾಗಿ ಆಕರ್ಷಿಸಿತು. ಸೆರೆಮನೆಯಲ್ಲಿ ನಾನೂ ಅನಾಥನಲ್ಲವೇ? ಪ್ರವಾದಿವರ್ಯರು(ಸ) ತನ್ನನ್ನು ಅತಿಥಿಯಾಗಿ ಪ್ರಶಂಸಿಸುವವರೊಡನೆ ಹೀಗೆನ್ನುತ್ತಿದ್ದರು: "ನಾನು ಒಣರೊಟ್ಟಿ ಮತ್ತು ದೊರಗು ಉತ್ತುತ್ತೆಯನ್ನು ತಿಂದು ಬೆಳೆದ ಬಡ ವಿಧವೆಯ ಮಗ." ಅವರ ಈ ವಿನಯದ ಮಾತುಗಳನ್ನು ಓದಿದಾಗ ನನ್ನ ಕಣ್ಣುಗಳು ತೇವಗೊಂಡವು. ಕೆಲವು ಕಾಲದ ಬಳಿಕ ಇಸ್ಲಾಮ್ ನನ್ನನ್ನು ತಾತ್ವಿಕವಾಗಿ ಆಕರ್ಷಿಸಿತು. ಸೆರೆಮನೆಯಲ್ಲಿ ಪ್ರವಾದಿವರ್ಯರ(ಸ) ಆಕರ್ಷಕ ಚರಿತ್ರೆ, ಬೋಧನೆಗಳು ನನ್ನ ಹೃದಯವನ್ನು ಸೂರೆಗೊಂಡವು. ಭೀತಿಯೇ ಮೈವೆತ್ತ ಆ ಸೆರೆಮನೆಯ ವಾತಾವರಣದಲ್ಲಿ, ನಿರ್ಭೀತಿಯಿಂದ ಬಾಳಿದ ಆ ಮಹಾತ್ಮರ ಜೀವನ ಚರಿತ್ರೆಯನ್ನು ಓದುವುದೇ ಒಂದು ಆನಂದವಾಗಿತ್ತು. ಆ ಆನಂದವು ನಿರ್ಭೀತಿಯನ್ನು ಸೆರೆಮನೆಯಲ್ಲಿಯೇ ಪರೀಕ್ಷಿಸಲು ನನಗೆ ಪ್ರೇರಕವಾಯಿತು. ಸೆರೆಮನೆಯ ರೌದ್ರವ ಮತ್ತು ನಿಷ್ಠುರತೆ ಹಗುರವಾಗಿ ಈ ಪ್ರೇರಣೆಯಿಂದ ತಲೆಯೆತ್ತಿ ನಡೆಯುವ ಧೈರ್ಯ ಬಂತು. ತರುವಾಯ ನಿರ್ಭೀತಿಯಿಂದ ಮಾತನಾಡುವ, ಹಾಡುವ ಮಾನಸಿಕ ಸ್ಥಿತಿ ಉಂಟಾಯಿತು. ಪ್ರವಾದಿ ಚರಿತ್ರೆಯ ಸ್ಫೂರ್ತಿಯಿಂದ ಸೆರೆಮನೆಯಲ್ಲಿ ನಾನು ನೆಮ್ಮದಿಯನ್ನು ಸಾಧಿಸಿದೆ.

## ಜೀವನ ವ್ಯವಸ್ಥೆ

ಪ್ರವಾದಿವರ್ಯರು(ಸ) ನಾನು ಈ ತನಕ ಓದಿ ತಿಳಿಯದ ಅದ್ಭುತ ವ್ಯಕ್ತಿಯೆಂದು ನನಗೆ ಭಾಸವಾಯಿತು. ಕೇವಲ ವಿರಾಗಿಗಳು ಮಾತ್ರ ಧರ್ಮ ಸಂಸ್ಥಾಪಕರಾಗುವರೆಂದು ನಂಬಲಾಗುತ್ತದೆ. ಆದರೆ ಇವರು ಗೃಹಸ್ಥ ಜೀವನವನ್ನು ಮನೋಹರವಾಗಿ ನಿರ್ವಹಿಸುತ್ತಿರುವಾಗಲೇ ಧಾರ್ಮಿಕ ನಾಯಕರಾದರು! ಪ್ರತಿಭಾನ್ವಿತ ವಿದ್ವಾಂಸರನ್ನು

ಬೆರಗುಗೊಳಿಸುವಂತಹ ಪವಿತ್ರ ವಚನಗಳನ್ನು ಬೋಧಿಸಿದ ಆ ವ್ಯಕ್ತಿಗೆ ಓದುಬರಹ ಬರುತ್ತಿರಲಿಲ್ಲವಂತೆ! ಧರ್ಮ ಜ್ಞಾನಿಗಳಿಗೆ ರಾಜ್ಯಭಾರ ಅಥವಾ ಅಧಿಕಾರ ಪೀಠದ ಬಗ್ಗೆ ಏನೇನೂ ತಿಳಿದಿರುವುದಿಲ್ಲ. ಆದರೆ ಇವರು ಅರೇಬಿಯಾದ ಆಡಳಿತಗಾರರಾಗಿದ್ದರು. ಏಕಕಾಲದಲ್ಲಿ ಧರ್ಮಜ್ಞಾನಿ ಮತ್ತು ಆಡಳಿತಗಾರರಾಗಿದ್ದರು. ಅವರ ಆಡಳಿತ ವೈಖರಿಯು ಇತರರಿಗಿಂತ ತೀರಾ ಭಿನ್ನವಾಗಿತ್ತು. ಹೀಗೇಕೆ? ಈ ಜಿಜ್ಞಾಸೆಯು ಇಸ್ಲಾಮೆಂಬ ಸುಮಧುರ ಹಾಗೂ ಉದಾತ್ತವಾದ ಹಾದಿಯ ಕುರಿತು ನನ್ನನ್ನು ಗಾಢವಾಗಿ ಚಿಂತಿಸುವಂತೆ ಮಾಡಿತು.

ಇಸ್ಲಾಮ್ ಎಂದರೇನು? ಈ ಮೂಲಭೂತ ತತ್ವವನ್ನು ನಾನು ಸೆರೆಮನೆಯಲ್ಲಿಯೇ ಓದಿ ತಿಳಿದುಕೊಂಡೆ. ಅದಕ್ಕಿಂತ ಮುಂಚೆ ಇಸ್ಲಾಮ್ ಕೇವಲ ಒಂದು ಧರ್ಮ; ಪ್ರವಾದಿ ಮುಹಮ್ಮದ್‌ರು(ಸ) ಅದರ ಸ್ಥಾಪಕರು ಎಂದಷ್ಟೇ ತಿಳಿದಿದ್ದೆ. ಇಸ್ಲಾಮ್, ಕೇವಲ ಏಕದೇವೋಪಾಸನೆಯನ್ನು ಅನುಮತಿಸುತ್ತದೆ. ಬಹುದೇವ ವಿಶ್ವಾಸವನ್ನು ನಿರಾಕರಿಸುತ್ತದೆ ಎಂಬ ತತ್ವದ ತಿರುಳು ನನಗೆ ಸೆರೆಮನೆಯಲ್ಲಿ ಚೆನ್ನಾಗಿ ಅರ್ಥವಾಯಿತು. ಕಲ್ಲು, ಚಿತ್ರಗಳನ್ನು ಮುಸ್ಲಿಮರು ಪೂಜಿಸುವುದಿಲ್ಲವೆಂದು ನನಗೆ ತಿಳಿದಿತ್ತು. ಆದರೆ ಅದರ ಮರ್ಮ ನನಗೆ ತಿಳಿದಿರಲಿಲ್ಲ. ಸೆರೆಮನೆಯಲ್ಲಿ ನಾನು ಅದರ ಕಾರಣಗಳನ್ನು ಓದಿ ತಿಳಿದೆ. ಇಸ್ಲಾಮ್ ಕೇವಲ ಒಂದು ಧರ್ಮವಲ್ಲ. ಅದು ಧರ್ಮ ವ್ಯಾಖ್ಯೆಯ ವ್ಯಾಪ್ತಿಗೆ ಸೇರುವುದಿಲ್ಲ. ಇಸ್ಲಾಮ್ ಒಂದು ಸಮಗ್ರ ಜೀವನ ಕ್ರಮವೆಂದು ನನಗೆ ವೇದ್ಯವಾಯಿತು. ಈ ಲೋಕ ಮತ್ತು ಇಲ್ಲಿನ ಹೊಣೆಗಾರಿಕೆಗಳಿಂದ ತಪ್ಪಿಸಿಕೊಳ್ಳಬೇಕೆಂದು ಇಸ್ಲಾಮ್ ಕಲಿಸುವುದಿಲ್ಲ. ಜಗತ್ತಿನ ಕರ್ತವ್ಯಗಳನ್ನು ನಿಷ್ಠೆಯಿಂದ ನಿರ್ವಹಿಸಬೇಕೆಂದು ಇಸ್ಲಾಮ್ ಹೇಳುತ್ತದೆ. ಸೆರೆಮನೆಯ ಓದು ಈ ತಿಳುವಳಿಕೆಗೆ ಸಹಕಾರಿಯಾಯಿತು.

## ಅನ್ಯಾಯದ ವಿರುದ್ಧ ಹೋರಾಟ

ರಾಮ ಆಳಿದರೇನು? ದೇವಧ್ಯಾನ ಮಾಡಿದರಾಯಿತೆನ್ನುವ ಅಕ್ರಮ-ಅನ್ಯಾಯಗಳ ಆಧುನಿಕ ರಾಜನೀತಿಯನ್ನು ಇಸ್ಲಾಮ್ ಸಹಿಸುವುದಿಲ್ಲ. ಅನ್ಯಾಯದ ವಿರುದ್ಧ ಹೋರಾಟವೇ ದೇವವಿಶ್ವಾಸದ ಬೇಡಿಕೆಯೆಂಬ ಇಸ್ಲಾಮಿನ ಘೋಷಣೆಯನ್ನು ಓದಿದಾಗ ರೋಮಾಂಚನದಿಂದ ನನ್ನ ಭುಜಗಳು ಕಂಪಿಸಿದುವು. ಇಸ್ಲಾಮ್ ಮತ್ತು ಪ್ರವಾದಿಯ ಬಗ್ಗೆ ಮತ್ತಷ್ಟು ಕಲಿಯಬೇಕೆಂಬ ಜಿಜ್ಞಾಸೆ ತೀಕ್ಷ್ಣಗೊಂಡಿತ್ತು. ಆ ಕುರಿತು ಪುಸ್ತಕ ಬರೆಯುವುದಕ್ಕೆ ಅಗತ್ಯವಿರುವ ಟಿಪ್ಪಣಿಗಳನ್ನು ಆರ್ದ್ರ ನಯನಗಳಿಂದ ಸೆರೆಮನೆಯಲ್ಲಿಯೇ ನಾನು ಗುರುತಿಸಿಕೊಂಡೆ.

ಸೆರೆಮನೆವಾಸಕ್ಕೆ ವಿದಾಯ ಸನ್ನಿಹಿತವಾಯಿತು. ಊರಿನಲ್ಲಿ ಸ್ವತಂತ್ರವಾಗಿ ಬಾಳುವ ಉಳಿದ ದಿನಗಳಲ್ಲಿ ಇಸ್ಲಾಮಿನ ಗಾಢ ಅಧ್ಯಯನ ನಡೆಸಬೇಕೆಂಬ ದೃಢ ನಿರ್ಧಾರದಿಂದಲೇ ಸೆರೆಮನೆಯಿಂದ ಹೊರಗೆ ಕಾಲಿಟ್ಟೆ. ಆದರೆ, ನನ್ನ ಆಶೆ ಥಕ್ಕನೆ ಈಡೇರಲಿಲ್ಲ. ರಾಜಕೀಯ ಪ್ರವಾಹದ ದೋಣಿಯು ಸೆರೆಮನೆಯ ಬಾಗಿಲಲ್ಲಿಯೇ ನನಗಾಗಿ ಕಾಯುತ್ತಿತ್ತು. ಇಸ್ಲಾಮ್ ಎಂಬ ಬೀಜವು ಹೃದಯಪಟಲದಲ್ಲಿ ಸುಪ್ತವಾಗಿ ನಿದ್ರಿಸಿತು.

----

# ನನ್ನ ಪ್ರೀತಿಯ ಧರ್ಮ

ರಾಜಕೀಯ ರಂಗದ ಚಳವಳಿ, ಆರ್ಭಟ, ವಿಜಯ-ಗದ್ದಲ, ಪೈಪೋಟಿಗಳ ಹುಚ್ಚು ಪ್ರವಾಹದಲ್ಲಿ ಚುಕ್ಕಾಣಿಯಿಲ್ಲದ ದೋಣಿಯಂತೆ ಕೊಚ್ಚಿ ಹೋದೆ. ಇಸ್ಲಾಮಿನ ಟಿಪ್ಪಣಿಗಳು ನನ್ನ ಗ್ರಂಥ ಭಂಡಾರದ ಮೂಲೆ ಸೇರಿತು. ಅದರ ನೆನಪೇ ಮಾಸಿತು.

ಹೀಗಿರಲು ಒಂದು ದಿನ ಓರ್ವ ಮುಸ್ಲಿಮ್ ಮಿತ್ರರು ಬಂದರು. ಅವರ ಪುತ್ರನ ಮುಂಜಿ ಸಮಾರಂಭದಲ್ಲಿ ಭಾಷಣ ಮಾಡಬೇಕೆಂದು ವಿನಂತಿಸಿದರು. ಭಾಷಣಕ್ಕಾಗಿ ಗ್ರಂಥ ಭಂಡಾರದಲ್ಲಿದ್ದ ಟಿಪ್ಪಣಿಯನ್ನು ಹುಡುಕಿದೆ. ಅದನ್ನು ಓದಿ ನೋಡಿದೆ, ಭಾಷಣ ಮಾಡಿದೆ. ಓರ್ವ ಭಾಷಣಗಾರನು ಮಾನಸಿಕವಾಗಿ ಮೂರು ಸ್ಥಿತಿಗಳನ್ನು ಅನುಭವಿಸುತ್ತಾನೆ. ಪ್ರಥಮತಃ ಭಾಷಣಕ್ಕಿಂತ ಮುಂಚೆ ಮನಸ್ಸಿನಲ್ಲಿ ಮೂಡುವ ವಿಚಾರಗಳನ್ನು ಕ್ರಮಬದ್ಧಗೊಳಿಸುವುದು. ಎರಡನೆಯದಾಗಿ, ಭಾಷಣದಲ್ಲಿ ಹೇಳಿದ ಮಾತು ಅಥವಾ ಮಂಡಿಸಿದ ವಿಚಾರಗಳ ಏರುಪೇರುಗಳ ಬಗ್ಗೆ ಮುಜುಗರವಾಗುವುದು. ಮೂರನೆಯದಾಗಿ, ಭಾಷಣ ಮುಗಿದ ಬಳಿಕ, 'ಛೆ! ಅದು ಹೇಳಲು ಮರೆತು ಬಿಟ್ಟೆನಲ್ಲಾ' ಎಂದು ಕೊರಗುವುದು. ನನ್ನ ಸಾರ್ವಜನಿಕ ಭಾಷಣಗಳಲ್ಲಿ, ನಾನು ಅದನ್ನು ಹೇಳಲು ಮರೆತು ಬಿಟ್ಟೆನಲ್ಲಾ ಎಂದು ಸಂಕಟಪಡುವ ಸ್ಥಿತಿ ಒಮ್ಮೆಯೂ ಬಂದಿರಲಿಲ್ಲ. ನಾನು ನಿರ್ಧರಿಸಿದ್ದನ್ನು ಸಂಪೂರ್ಣವಾಗಿ ಹೇಳುತ್ತಿದ್ದೆ. ಆದರೆ ಈ ಮುಸ್ಲಿಮ್ ಮಿತ್ರನ ಖಾಸಗೀ ಕಾರ್ಯಕ್ರಮದಲ್ಲಿ ಆ ಅಚಾತುರ್ಯವೂ ಆಗಿ ಹೋಯಿತು. ಇಸ್ಲಾಮಿನ ಬಗ್ಗೆ ನಾನು ಪೂರ್ಣ ಶ್ರಮದಿಂದ ಭಾಷಣ ಮಾಡಿದರೂ, ಇನ್ನೂ ಹಲವು ವಿಷಯಗಳನ್ನು ಹೇಳಬಹುದಾಗಿತ್ತೆಂದು ಮನಸ್ಸು ಪಿಸು ನುಡಿಯಿತು. ಇಸ್ಲಾಮ್ ಧರ್ಮವು ಒಂದು ಮಹಾ ಸಮುದ್ರವಿದ್ದಂತೆ. ನಾನು ಅದರಿಂದ ಕೇವಲ ಒಂದು ಬೊಗಸೆ ಎತ್ತಿಕೊಂಡಿದ್ದೇನೆ. ನಾನೋರ್ವ ಪ್ರಚಂಡ ಭಾಷಣಗಾರನೆಂಬ ಹಮ್ಮನ್ನು ಇಸ್ಲಾಮ್ ಇಳಿಸಿತು.

ಭಾಷಣದಲ್ಲಿ ಹೇಳದಿದ್ದರೇನಾಯಿತು? ಹೇಳದೆ ಉಳಿದ ವಿಚಾರಗಳನ್ನು ನಾನು ಬರೆಯುವ ನಿರ್ಧಾರ ಮಾಡಿದೆ. ಆ ಪ್ರಕಾರ ನನ್ನ 'ನೀರೋಟ್ಟಮ್' ಪತ್ರಿಕೆಯಲ್ಲಿ ಒಂದು ಲೇಖನ ಬರೆದೆ. ಆದರೆ ಆ ಸೋಜಿಗ ಪುನಃ ಮರುಕಳಿಸಿತು! ಇಸ್ಲಾಮ್, ಆ ಲೇಖನವನ್ನೂ ಮೀರಿ ನಿಂತಿತು. ಎರಡನೇ ಲೇಖನ ಬರೆದೆ. ಉಹೂಂ! ಇಸ್ಲಾಮ್ ಅದನ್ನೂ ಮೀರಿಸಿತು. ಮೂರು... ನಾಲ್ಕು... ಐದನೇ ಲೇಖನ ಬರೆದೆ. ಆ ಲೇಖನಗಳ ಸಮಾಹಾರವೇ 'ನನ್ನ ಪ್ರೀತಿಯ ಧರ್ಮ.' ಆ ಪುಸ್ತಕದ ಹಿಡಿತಕ್ಕೂ ಸಿಗದೆ ಆಕಾಶದಂತೆ ಹಬ್ಬಿ ನಿಂತು ಇಸ್ಲಾಮ್ ನಸು ನಕ್ಕಿತು.

## ಪ್ರಖ್ಯಾತಿ

'ನಾನ್ ಕಾದಲಿಕ್ಕುಮ್ ಇಸ್ಲಾಮ್' ಎಂಬ ಪುಸ್ತಕವನ್ನು ಬಹಳ ಸಾದಾ ರೀತಿಯಲ್ಲಿ ಪ್ರಕಟಿಸಿದ್ದೆ. ಅಂದವಾದ ರಕ್ಷಾ ಪುಟವಿಲ್ಲದೆ, ನ್ಯೂಸ್ ಪ್ರಿಂಟ್‌ನಲ್ಲಿ ಮುದ್ರಿಸಲಾಗಿತ್ತು. ಆ ಪುಸ್ತಕವು ಭವಿಷ್ಯದಲ್ಲಿ ಜಾಗತಿಕ ಮುಸ್ಲಿಮರ ಗಮನ ಸೆಳೆಯಬಹುದೆಂದು ನಾನು ನಿರೀಕ್ಷಿಸಿರಲಿಲ್ಲ. ಅದರಲ್ಲಿ ಜಗತ್ತಿನ ಗಣ್ಯ ವಿಭಾಗವೊಂದರ ಮನಸೆಳೆಯುವಂತಹದ್ದು ಏನಿದೆ? ಇಸ್ಲಾಮ್ ವಿದ್ವಾಂಸರು ಈ ತನಕ ಹೇಳಿರುವುದಕ್ಕಿಂತ ಹೆಚ್ಚೇನೂ ನಾನು ಬರೆದಿರಲಿಲ್ಲ. ಇಸ್ಲಾಮ್ ಧರ್ಮವನ್ನು ವಿವಿಧ ಧರ್ಮಗಳೊಂದಿಗೆ ಹೋಲಿಸಿದ್ದೆ. ಪ್ರವಾದಿವರ್ಯರೊಂದಿಗೆ(ಸ) ಇತರ ಕ್ರಾಂತಿಕಾರಿಶಗಳನ್ನೂ ಜಗತ್ತು ಕೊಂಡಾಡುವ ಇತರ ಮಹಾ ಪುರುಷರನ್ನೂ ಒರೆಗೆ ಹಚ್ಚಿ, ಪ್ರವಾದಿವರ್ಯರ(ಸ) ಮಾದರಿಯು ಅತ್ಯುತ್ತಮವೆಂದು ಸಮರ್ಥಿಸಿದ್ದೆ. ಅದೇ ವೇಳೆ ಇಸ್ಲಾಮಿನ ತತ್ವಾದರ್ಶ ವಿಚಾರಗಳನ್ನು ನನ್ನ ಜ್ಞಾನ ಮಿತಿಗಳಲ್ಲಿ ವಿಶ್ಲೇಷಿಸಿದ್ದೆ. ಆ ಪುಸ್ತಕವನ್ನು ತನ್ಮಯತೆಯಿಂದ ಬರೆದುದರಿಂದಲೇ ದೇವಾನುಗ್ರಹದಿಂದ ಅದು ಜಗದ್ವಿಖ್ಯಾತವಾಯಿತು. ದೇಶ-ವಿದೇಶಗಳಲ್ಲಿ ಮುಸ್ಲಿಮರು ಏರ್ಪಡಿಸಿದ್ದ ಸಮಾರಂಭಗಳಲ್ಲಿ ಭಾಗವಹಿಸುವ ಸದವಕಾಶವನ್ನೂ ಅದು ನನಗೆ ಒದಗಿಸಿತು.

----

# ಪ್ರವಾಸಗಳು

ಮುಸ್ಲಿಮರ ಆಮಂತ್ರಣದಂತೆ ಹೊರ ರಾಜ್ಯ ಮತ್ತು ರಾಷ್ಟ್ರಗಳಲ್ಲಿ ನಡೆಸಿದ ಪ್ರವಾಸದಿಂದ ಮುಸ್ಲಿಮರನ್ನು ಸೂಕ್ಷ್ಮವಾಗಿ ಪರಿಶೀಲಿಸುವ ಸಂದರ್ಭ ಸಿಕ್ಕಿತು. ಈ ತನಕ ಮುಸ್ಲಿಮರನ್ನು ನಾನು ಆ ದೃಷ್ಟಿಯಿಂದ ಪರಿಶೀಲಿಸಿರಲಿಲ್ಲ. ಅವರನ್ನು ಮಿತ್ರರು, ಮಾನವರೆಂಬ ಸಾಮಾನ್ಯ ದೃಷ್ಟಿಯಿಂದಲೇ ನೋಡುತ್ತಿದ್ದೆ. ಹೊಸ ವಾತಾವರಣದಲ್ಲಿ ಇಸ್ಲಾಮ್ ಬೀರಿದ ಪ್ರಕಾಶದಲ್ಲಿ ಮುಸ್ಲಿಮರನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅವರು ಪವಿತ್ರ ಕುರ್‌ಆನಿನ ಆದೇಶದಂತೆ ಬಾಳುತ್ತಿದ್ದಾರೆಯೇ? ಅವರು ಪ್ರವಾದಿವರ್ಯರು(ಸ) ತೋರಿದ ಸನ್ಮಾರ್ಗದಲ್ಲಿ ನಡೆಯುತ್ತಿದ್ದಾರೆಯೇ? ನಾನು ಪರೀಕ್ಷಾ ಕೊಠಡಿಯಲ್ಲಿ ಹದ್ದುಗಣ್ಣಿನಿಂದ ಗಸ್ತು ನಡೆಸುವ ಅಧ್ಯಾಪಕನ ದೃಷ್ಟಿಯಿಂದ ಮುಸ್ಲಿಮರನ್ನು ವೀಕ್ಷಿಸಲಿಲ್ಲ. ನಾನು ಅವರಲ್ಲಿ ಪ್ರತಿಯೊಂದು ಸತ್ಕಾರ್ಯವನ್ನು ಕಂಡಾಗ, ಸಂತೋಷದಿಂದ ಕುಣಿದಾಡುವ ಬಾಲಕನಂತಾಗುತ್ತಿದ್ದೆ. ಓಹೋ! ಈ ಮುಸ್ಲಿಮನಲ್ಲಿ ಪವಿತ್ರ ಕುರ್‌ಆನಿನ ಏಕದೇವ ಸಿದ್ಧಾಂತ ಪ್ರಕಟವಾಗಿದೆಯಲ್ಲಾ! ಆಹಾ! ಈ ಮುಸ್ಲಿಮನಲ್ಲಿ ಆ ಪ್ರವಾದಿವರ್ಯರ(ಸ) ವಿಶಿಷ್ಟ ಗುಣ ಮೈಗೂಡಿದೆಯಲ್ಲಾ! ಇಂತಹ ಪುಟ್ಟ ರಶ್ಮಿಗಳನ್ನು ಕಂಡಾಗ ಸಂಪೂರ್ಣ ಸೂರ್ಯನನ್ನು ಕಂಡಷ್ಟು ಸಂತೋಷವಾಗುತ್ತಿತ್ತು. ಅದಕ್ಕೆ ಕಾರಣವೂ ಇತ್ತು. ಈ ಮುಸ್ಲಿಮರಂತೆ ಚಿಕ್ಕಚಿಕ್ಕ ಕಿರಣಗಳನ್ನು ಮೈಗೂಡಿಸಿ ಪೂರ್ಣ ಶೋಭೆಯಿಂದ ಸ್ವಯಂ ಬೆಳಗಬೇಕೆಂಬ ಅದಮ್ಯ ಆಕಾಂಕ್ಷೆ!

## ಮುಸ್ಲಿಮರ ಆದರ್ಶ ನಿಷ್ಠೆ

ರಾಜಕೀಯ ಜಗತ್ತಿನ ಭೋರ್ಗರೆತ ಮತ್ತು ಕಠೋರತೆಯಲ್ಲಿ ಈ ಮಿಣುಕು ಕಿರಣಗಳು ನನಗೆ ನೆಮ್ಮದಿ ನೀಡಿತು. ಮುಸ್ಲಿಮರನ್ನು ಅತಿ ಸನಿಹದಿಂದ ಪರಿಶೀಲಿಸಿದಾಗ ಅವರ ಮತ್ತು ಇತರರ ಸ್ಪಷ್ಟ ಅಂತರ ವ್ಯಕ್ತವಾಯಿತು. ದೇವನು ಒಬ್ಬನೆಂಬ ಬಗ್ಗೆ ಮುಸ್ಲಿಮರು ದೃಢಚಿತ್ತರಾಗಿದ್ದರು. ಮುಸ್ಲಿಮರಲ್ಲಿ ಪರಸ್ಪರ ಭಿನ್ನಾಭಿಪ್ರಾಯವಿದ್ದರೂ ಏಕದೇವ ವಿಶ್ವಾಸವು ಅವರಲ್ಲಿ ನಿರ್ವಿವಾದವಾಗಿದೆ. ಯಾವ ಮುಸ್ಲಿಮನೂ ಇಬ್ಬರು ದೇವರಿದ್ದಾರೆಂದು ಒಪ್ಪುವುದಿಲ್ಲ. ಬಹುದೇವಾರಾಧನೆ ಮಾಡುವುದಿಲ್ಲ. ಹಾಗೆಯೇ ಪವಿತ್ರ ಕುರ್‌ಆನಿನ ಬಗ್ಗೆಯೂ ಅವರಲ್ಲಿ ಭಿನ್ನಾಭಿಪ್ರಾಯವಿಲ್ಲ. ಮುಸ್ಲಿಮರು ದೇವ, ವೇದ ಮತ್ತು ಪ್ರವಾದಿ ಈ ಮೂರರಲ್ಲಿಯೂ ಏಕ ಮನಸ್ಸಿನಿಂದ ಅಚಂಚಲ ವಿಶ್ವಾಸವಿರಿಸಿರುವ ಹಿನ್ನೆಲೆಯಲ್ಲಿ, ಅವರ ನಡುವಣ ಆಂಶಿಕ ಭಿನ್ನಾಭಿಪ್ರಾಯಗಳು ಕಳವಳಕಾರಿಯೆಂದು ನಾನು ಸರ್ವಥಾ ಭಾವಿಸಿಲ್ಲ.

## ಸುಂದರ ವೈರುಧ್ಯ

ಪ್ರತಿಯೊಬ್ಬ ಮುಸ್ಲಿಮನೂ ಮುಸ್ಲಿಮೇತರನಿಗಿಂತ ಏನಾದರೊಂದು ವಿಷಯದಲ್ಲಿ ಭಿನ್ನನಾಗಿರುತ್ತಾನೆ. ಅದು ಅವರ ಇನ್ನೊಂದು ವೈರುಧ್ಯವೆಂದೇ ಪರಿಗಣಿಸಿದ್ದೇನೆ. ಇನ್ನು ಆ ರೋಚಕ ವೈರುಧ್ಯಗಳನ್ನು ವಿವರವಾಗಿ ಪರಿಶೀಲಿಸೋಣ. ಅವರು ದೇವನ ಹೊರತು ಅನ್ಯರಿಗೆ ಸಾಷ್ಟಾಂಗವೆರಗುವುದಿಲ್ಲ. ಆದರೆ ಮಾನವರನ್ನು ಯೋಗ್ಯ ರೀತಿಯಲ್ಲಿ ಗೌರವಿಸಬೇಕೆಂಬ ಇಸ್ಲಾಮಿೀ ಆದೇಶಿತ ಉತ್ತಮ ಗುಣವನ್ನು ನಾನು ಭೇಟಿಯಾದ ಪ್ರತಿಯೊಬ್ಬ ಮುಸ್ಲಿಮನಲ್ಲಿಯೂ ಕಂಡಿದ್ದೇನೆ. ಗತಕಾಲದಲ್ಲಿ ನಾನು ಭೇಟಿಯಾದ ಪ್ರತಿಯೊಬ್ಬ ಮುಸ್ಲಿಮನಲ್ಲಿಯೂ ಆ ಸದ್ಗುಣವನ್ನು ಗುರುತಿಸಿದ್ದೆ. ಓರ್ವನು ಶ್ರೀಮಂತಿಕೆ, ಅಧಿಕಾರ, ಪಕ್ಷ ಅಥವಾ ಸರಕಾರದಲ್ಲಿ ಗಣ್ಯನೆಂಬ ಮಾತ್ರಕ್ಕೆ ಮುಸ್ಲಿಮರು ಆತನ ಕಾಲಿಗೆ ಅಡ್ಡ ಬಿದ್ದು, ಹಲ್ಲು ಕಿಸಿದು, ಕೈಮುಗಿದು ನಿಲ್ಲುವುದನ್ನು ನಾನು ಕಂಡಿಲ್ಲ. ತದ್ವಿರುದ್ಧವಾಗಿ ಯಾವನಾದರೂ ಮುಸ್ಲಿಮ್ ಯುವಕ ಅಜ್ಞಾನದಿಂದ ಹಾಗೇನಾದರೂ ಮಾಡಿದರೆ, ಇಡೀ ಮುಸ್ಲಿಮ್ ಸಮುದಾಯ ಕುಪಿತಗೊಂಡು ಪ್ರತಿಭಟಿಸಿದ ಪ್ರಕರಣಗಳನ್ನೂ ನಾನು ನೋಡಿದ್ದೇನೆ. ಅದಕ್ಕಾಗಿ ಮನ ದಣಿಯುವಷ್ಟು ಸಂತೋಷಪಟ್ಟಿದ್ದೇನೆ. ಮಾನವನು ಮಾನವನ ಕಾಲಿಗೆ ಅಡ್ಡ ಬೀಳುವುದು ಕೇವಲ ಅಜ್ಞಾನವೆಂದಷ್ಟೇ ನಾನು ತಿಳಿದಿದ್ದೆ. ಆದರೆ ಅದು ಮಾನವನನ್ನು ದೇವನಿಗೆ ಭಾಗಿಗೊಳಿಸಿದಂತಾಗುವುದು, ಮಾನವನು ಕೇವಲ ದೇವನಿಗೆ ಮಾತ್ರ ಸಾಷ್ಟಾಂಗವೆರಗಬೇಕೆಂಬ ಇಸ್ಲಾಮಿೀ ತತ್ವವು ನನ್ನ ಮನಸ್ಸಿಗೆ ಗಂಭೀರವಾಗಿ ನಾಟಿತು. ಎಲ್ಲ ಕಾಲಗಳಲ್ಲಿಯೂ ಕೇವಲ ಆತ್ಮಾಭಿಮಾನದ ಸಮಸ್ಯೆಯೆಂದು ಭಾವಿಸಲಾಗಿದ್ದ ಒಂದು ಆಚಾರವನ್ನು ಇಸ್ಲಾಮ್ ದೇವ ಸಿದ್ಧಾಂತದ ಭಾಗವಾಗಿ ಅಂಗೀಕರಿಸಿದೆ. ಹಾಗಿದ್ದರೂ ಅದೇ ವೇಳೆ ಮುಸ್ಲಿಮರು ಅನ್ಯರನ್ನು ಗೌರವಿಸುವುದರಲ್ಲಿಯೂ ಮೊದಲಿಗರೆಂದು ನಾನು ಕಂಡುಕೊಂಡೆ. ಒಮ್ಮೆ ಮುಖ ನೋಡುವುದು, ಮುಗುಳ್ನಗುವುದು, ಬನ್ನಿ ಅಂತ ಹೇಳುವುದು, ಹೆಚ್ಚೆಂದರೆ ಕೈ ಮುಗಿದು ವಂದಿಸುವುದು, ಇದು ನಾನು ರೂಢಿಸಿದ್ದ ಸ್ನೇಹೋಪಚಾರ.

## ನಿಷ್ಕಳಂಕ ಪ್ರೀತಿ

ಪರಸ್ಪರ ಶಾಂತಿ ನೆಮ್ಮದಿ ಹಾರೈಕೆ, ಹಸ್ತಲಾಘವ, ಆಲಿಂಗನ, ಅತಿಥಿ ಸತ್ಕಾರ, ಸಾಮಾನ್ಯ ಅಗತ್ಯಗಳಲ್ಲಿಯೂ ಪರಸ್ಪರ ಸಹಕಾರ, ಇಂತಹ ಹೃದಯಂಗಮ ಗುಣನಡತೆಯು ಪ್ರತಿಯೊಬ್ಬ ಮುಸ್ಲಿಮನಲ್ಲಿಯೂ ಕಾಣಿಸುತ್ತಿತ್ತು. ಅದರ ಪ್ರಮಾಣದಲ್ಲಿ ಏರಿಳಿತವಿರಬಹುದಾದರೂ ಈ ಗುಣ ಸರ್ವಸಾಮಾನ್ಯವಾಗಿ ಎಲ್ಲ ಮುಸ್ಲಿಮರಲ್ಲಿಯೂ ಇದೆ.

ಇಸ್ಲಾಮಿನ ತಾತ್ವಿಕ ವೈಶಿಷ್ಟ್ಯಗಳಿಂದ ಮಾತ್ರ ನಾನು ಆಕರ್ಷಿತನಾದುದಲ್ಲ. ನಾನು ಸಂಧಿಸಿದ ಪ್ರತಿಯೊಬ್ಬ ಮುಸ್ಲಿಮನೂ ಒಂದಿಲ್ಲೊಂದು ರೀತಿಯಲ್ಲಿ ನನ್ನನ್ನು ಆಕರ್ಷಿಸಿದನೆಂದರೆ ಅತಿಶಯೋಕ್ತಿಯಾಗಲಾರದು. ಅದರಲ್ಲಿ ಕೇರಳದ ಮುಸ್ಲಿಮರೂ ಸೇರಿದ್ದಾರೆ.

## ದಲ್‌ವತ್ ನಗರದಲ್ಲಿ

ಕೆಲವು ವರ್ಷಗಳ ಹಿಂದೆ ನನಗೆ ಕೇರಳದಿಂದ ಆಮಂತ್ರಣ ಬಂದಿತ್ತು. ಆ ವೇಳೆ "ನಾನ್ ಕಾದಲಿಕ್ಕುಮ್ ಇಸ್ಲಾಮ್" ಮಲೆಯಾಳಮ್‌ನಲ್ಲಿ ಅನುವಾದಗೊಂಡಿತ್ತು. ಕೇರಳದ ಮಲಪ್ಪುರಮ್(ದಲ್‌ವತ್ ನಗರ)ನಲ್ಲಿ ಜರಗಿದ ಜಮಾಅತೆ ಇಸ್ಲಾಮಿ ಸಮ್ಮೇಳನದಲ್ಲಿ ಆ ಪುಸ್ತಕದ ಬಿಡುಗಡೆ ಕಾರ್ಯಕ್ರಮವನ್ನು ಇರಿಸಿದ್ದರು. ಅದಕ್ಕಾಗಿ ನನ್ನನ್ನು ಆಮಂತ್ರಿಸಿದ್ದರು. ಮಲಪ್ಪುರಮ್‌ನಲ್ಲಿ ಬಹಳ ಉಲ್ಲಾಸದಾಯಕ ಅನುಭವಗಳು ನನಗಾಗಿ ಕಾದಿತ್ತು. ಅವರ ಪ್ರೀತ್ಯಾದರ, ಅತಿಥಿ ಸತ್ಕಾರ ಕಾಳಜಿಯು ನನ್ನ ನಿರೀಕ್ಷೆಯನ್ನೂ ಮೀರಿಸಿತು. ಅಂದು ಮಲೆಯಾಳಿಗಳಿಗೆ ತಮಿಳ್ನಾಡಿನಲ್ಲಿ ತೀವ್ರ ಬೆದರಿಕೆಯಿತ್ತು. ಮಲೆಯಾಳಿಗಳಿಗೆ ಸಂಪರ್ಕದಲ್ಲಿ ಏನೋ ಅಂತರವಿದೆಯೆಂದು ನನ್ನಂಥವರು ಭಾವಿಸುತ್ತಿದ್ದರು. ಆದರೆ, ಇಸ್ಲಾಮಿನ ವಿಶ್ವಭ್ರಾತೃತ್ವ ಪ್ರಜ್ಞೆಯು ಅಂತಹ ಎಲ್ಲ ಅಂತರಗಳನ್ನೂ ಕೇರಳದ ಮಣ್ಣಿನಿಂದ ನಿವಾರಿಸಿರುವಂತೆ ಕಂಡುಬಂತು. ಭೇದಭಾವದ ಯಾವ ಛಾಯೆಯೂ ಗೋಚರಿಸಲಿಲ್ಲ. ಆ ಸಮ್ಮೇಳನದಲ್ಲಿ ಪರಸ್ಪರ ಭ್ರಾತೃತ್ವದ ಭಾವನೆ ನಳನಳಿಸುತ್ತಿತ್ತು.

ಆಡಂಬರ ಪ್ರದರ್ಶನ, ಬೃಹತ್ ಕಮಾನುಗಳು, ಭವ್ಯ ತೋರಣ, ಸದ್ದುಗದ್ದಲ, ಇದು ನಾನು ಕಂಡರಿತಿದ್ದ ಸಮ್ಮೇಳನಗಳ ಚಿತ್ರ. ಆದರೆ ದಲ್‌ವತ್ ನಗರದ ಬಯಲಿನಲ್ಲಿ ಬೈಹುಲ್ಲು ಹರಡಿ ಅದರ ಮೇಲೆ ಚಾಪೆ ಹಾಸಿದ ಸಮ್ಮೇಳನದ ಸಿದ್ಧತೆಯನ್ನು ನೋಡಿ ನಾನು ಬೆರಗಾದೆ. ಶಬ್ದ ಕೋಲಾಹಲವಿಲ್ಲದ, ಶಿಸ್ತಿನಿಂದ ಸರಿಯುವ ಸಮ್ಮೇಳನದ ಪ್ರತಿನಿಧಿಗಳನ್ನು ನೋಡಿ ನನ್ನ ಕಣ್ಣುಗಳಿಗೆ ವಿಸ್ಮಯವಾಯಿತು. ಸಮ್ಮೇಳನಕ್ಕೆ ಬಂದವರು ನಮಾಝ್‌ನ ವೇಳೆಯಲ್ಲಿ ತಮ್ಮ ವಸ್ತು ಸಾಮಗ್ರಿಗಳನ್ನು ಚಪ್ಪರದಲ್ಲಿಯೇ ಬಿಟ್ಟು ವುಝೂ ಮಾಡಲು ಹೋಗುತ್ತಾರೆ!

ನಮಾಝ್‌ನ ಸನ್ನಾಹವು ಸನ್ಯಾಸವೇ? ಇಸ್ಲಾಮಿನಲ್ಲಿ ಸನ್ಯಾಸವಿಲ್ಲವೆಂದು ನಾನು ಕೇಳಿದ್ದೆ. ಬಾಂಗ್ ಕರೆ ಮೊಳಗಿದ ಕೂಡಲೇ ವಸ್ತುಗಳನ್ನು ಅಲ್ಲಿಯೇ ತೊರೆದು ಹೋಗುವ ದೃಶ್ಯವು ನನ್ನ ಅಂತರಂಗವನ್ನು ಪುಳಕಿತಗೊಳಿಸಿತು. ಅವರು ದೇವನಿಗಾಗಿ ಸರ್ವಸ್ವವನ್ನೂ ತ್ಯಜಿಸುವವರೆಂದು ನನ್ನ ಮನಸ್ಸು ಪಿಸುಗುಟ್ಟಿತು.

ಇಂತಹ ವಾತಾವರಣದಲ್ಲಿ ಆ ಸಮ್ಮೇಳನದಲ್ಲಿ ನಾನು ಭಾಷಣ ಮಾಡಬೇಕಾಗಿತ್ತು. ಅದರ ತಯಾರಿಗಾಗಿ ಇಸ್ಲಾಮಿ ಸಾಹಿತ್ಯಗಳ ಗಾಢ ಅಧ್ಯಯನ ನಡೆಸಬೇಕಾಗಿತ್ತು. ಇಸ್ಲಾಮಿ ಗ್ರಂಥಗಳನ್ನು ಓದುತ್ತಲಿದ್ದಂತೆ 'ಜ್ಞಾನ ಪ್ರಕಾಶ' ಪಸರಿಸುತ್ತಲಿತ್ತು. ಸಮ್ಮೇಳನದಲ್ಲಿ ಹಿಂದಿನ ಸೋಜಿಗ ಮರುಕಳಿಸಿತು. ಭಾಷಣ ಮುಗಿದಾಗ 'ಛೆ! ಇನ್ನೂ ಕೆಲವು ವಿಷಯಗಳನ್ನು ಹೇಳಬಹುದಿತ್ತು' ಎಂಬ ಭಾವನೆ ನನ್ನನ್ನು ಕಾಡಿತು. ಇಸ್ಲಾಮಿನ ಕುರಿತು ಸಮಗ್ರವಾಗಿ ಭಾಷಣ ಮಾಡಲಾಗದೆ, ನನ್ನ ಪಾಂಡಿತ್ಯದ ಅಹಂಭಾವವು ಇಸ್ಲಾಮಿಗೆ ಶರಣಾಯಿತು.

———

# ವಿದೇಶ ಸಂಚಾರ

ಪಾಕಿಸ್ತಾನದಿಂದ ಆಮಂತ್ರಣ ಬಂದಾಗ ನಾನು ಮಧುರೆಯ ಜೈಲಿನಲ್ಲಿದ್ದೆ. 'ನಾನ್ ಕಾದಲಿಕ್ಕುಮ್ ಇಸ್ಲಾಮ್' ಪುಸ್ತಕವನ್ನು ಪಾಕಿಸ್ತಾನದಲ್ಲಿ ಸಿಂಧೀ ಭಾಷೆಗೆ ಅನುವಾದಿಸಿದ್ದರು. ಕರಾಚಿಯಲ್ಲಿ ಜರಗಲಿದ್ದ ವಿಶ್ವಸಿಂಧೀ ಸಮ್ಮೇಳನದಲ್ಲಿ ಅದನ್ನು ಬಿಡುಗಡೆಗೊಳಿಸಲು ನಿರ್ಧರಿಸಿದ್ದರು. ತನ್ನಿಮಿತ್ತ ನನ್ನನ್ನು ಸಮ್ಮೇಳನಕ್ಕೆ ಆಹ್ವಾನಿಸಿದ್ದರು. ದೆಹಲಿಯಿಂದ ಕರಾಚಿಗೆ ಹೊರಟಾಗ 'ಅಹಿತಕರ ಸಂಬಂಧವಿರುವ ರಾಷ್ಟ್ರಕ್ಕೆ' ಹೋಗುತ್ತಿರುವೆನೆಂದು ಭಾವಿಸಿದ್ದೆ. ಆದರೆ ಅಸದುಲ್ಲಾ ಭುಟ್ಟೋರಂತಹ ಮಿತ್ರರೊಡನೆ ಬೆರೆತಾಗ ಇಸ್ಲಾಮೀ ಸಂಬಂಧವು ರಾಜಕೀಯ ಸಂಬಂಧಕ್ಕಿಂತ ಗಾಢವೆಂದು ನನಗೆ ಮನವರಿಕೆಯಾಯಿತು. ರಾಷ್ಟ್ರ ಗಡಿಗಳನ್ನೂ ವೀಸಾ ಸಂಪ್ರದಾಯಗಳನ್ನೂ ಮೀರಿಸುವ ವಿಶ್ವ ಭ್ರಾತೃತ್ವದ ಅಮೃತದ ಹನಿಯನ್ನು ಸವಿದೆ. ಪಾಕಿಸ್ತಾನಕ್ಕೆ ಹೋಗುವಾಗ ಔಪಚಾರಿಕವಾಗಿ ಇಸ್ಲಾಮ್ ಧರ್ಮವನ್ನು ಸ್ವೀಕರಿಸಲಿಲ್ಲ. ಹಾಗಿದ್ದರೂ, ಪಾಕಿಸ್ತಾನದ ಇಸ್ಲಾಮೀ ಬಾಂಧವರು ಹಾರ್ದಿಕ ಪ್ರೀತ್ಯಾದರಗಳನ್ನು ತೋರಿದರು.

ಕರಾಚಿಯ ಪಂಚತಾರಾ ಹೊಟೇಲೊಂದರಲ್ಲಿ ಸಿಂಧೀ ಸಮ್ಮೇಳನವನ್ನು ಏರ್ಪಡಿಸಿದ್ದರು. ನಾನು ಸಮ್ಮೇಳನ ಮಂಟಪಕ್ಕೆ ಪ್ರವೇಶಿಸಿದಾಗ, ನನ್ನ ತಮಿಳು ವಸ್ತ್ರ ವಿನ್ಯಾಸವು ಎಲ್ಲರ ಗಮನ ಸೆಳೆಯಿತು. ನಾನು ತೀರಾ ಅಪರಿಚಿತನಾಗಿದ್ದರೂ 'ಅಸ್ಸಲಾಮು ಅಲೈಕುಮ್' (ಅಭಿನಂದನೆ) ಹೇಳುವುದರಲ್ಲಿ ಮೊದಲಿಗರಾಗಿರೆಂಬ ಇಸ್ಲಾಮೀ ಉಪದೇಶದ ಪಾಲನೆಯಲ್ಲಿ ಅವರು ಸ್ಪರ್ಧಿಸುತ್ತಿರುವಂತೆ ತೋರುತ್ತಿತ್ತು.

ನನ್ನ ಪುಸ್ತಕದ ಜತೆ ಇತರ ಹಲವು ಪುಸ್ತಕಗಳನ್ನು ಪ್ರಕಾಶನಗೊಳಿಸಿದ್ದರು. ನಾನು ಭಾಷಣದ ವೇಳೆ ಪಾಕ್ ಅಧ್ಯಕ್ಷ ಝಿಯಾವುಲ್ ಹಕ್‌ರನ್ನು ವೇದಿಕೆಯಲ್ಲಿ ಭೇಟಿಯಾದೆ. ಅವರ ಕುರಿತು ಭೀಕರ ವರ್ಣನೆಗಳನ್ನು ಈ ಹಿಂದೆ ಕೇಳಿದ್ದೆ. ಆದರೆ ವೇದಿಕೆಯಲ್ಲಿ ಅವರ ವರ್ತನೆಯು ಓರ್ವ ವಿನೀತ ಮುಸ್ಲಿಮನನ್ನು ಜ್ಞಾಪಕಕ್ಕೆ ತರುತ್ತಿತ್ತು. ಸಿಂಧೀ ಜನರ ರಿವಾಜಿನಂತೆ ನನಗೆ ಜರಿ ಉಡುಪು(ಅಶ್ರಕ್) ಮತ್ತು ಸಣ್ಣ ಟೋಪಿ ತೊಡಿಸಿದರು. ಸ್ಮರಣಾರ್ಥ ಉಡುಗೊರೆಯನ್ನೂ ನೀಡಿ ಸನ್ಮಾನಿಸಿದರು. ನಾನು ತಮಿಳಿನಲ್ಲಿಯೇ ಭಾಷಣ ಮಾಡಿದೆ. ಇಸ್ಲಾಮೀ ಸಿದ್ಧಾಂತ ಮತ್ತು ತಮಿಳ್ನಾಡಿನ ಸಂಬಂಧದ ಬಗ್ಗೆ ಮಾತನಾಡಿದೆ. ತಮಿಳ್ನಾಡಿನಿಂದ ನಮ್ಮ ಜತೆಗಿದ್ದ ಜಮೀಲ್ ಅಹ್ಮದ್ ಅವರು ಅದನ್ನು ಭಾಷಾಂತರಿಸಿದರು.

ಕರಾಚಿ ಸಮ್ಮೇಳನದ ಎರಡು ಮೂರು ದಿನಗಳಲ್ಲಿ ನಮ್ಮ ಸಂಚಾರ ಅವಧಿ ಮುಗಿಯಲಿತ್ತು. ಆದರೂ ಪಾಕಿಸ್ತಾನದಲ್ಲಿ ನಾನು ಕೆಲವಾರು ದಿನ ಹೆಚ್ಚು ಇರಬಯಸಿದ್ದೆ. ಅಧ್ಯಕ್ಷ ಝಿಯಾವುಲ್ ಹಕ್ ಅವರ ಅತಿಥಿಯಾಗಿ ಸಂಚಾರ ಮುಂದುವರಿಸುವಂತೆ ವೇದಿಕೆಯಲ್ಲಿಯೇ ಘೋಷಿಸಿದರು. ಹೀಗೆ ಕರಾಚಿಯಿಂದ ಆರಂಭಿಸಿ ಲಾಹೋರ್, ಪೇಶಾವರ,

ಇಸ್ಲಾಮಾಬಾದ್(ರಾಜಧಾನಿ), ಕ್ವೆಟ್ಟಾ, ಹೈದರಾಬಾದ್, ಚಕ್ಕರ್, ಮೆಹೆಂಜೊದಾರೋ ಮುಂತಾದೆಡೆಗಳನ್ನು ಸಂದರ್ಶಿಸಿದೆ. ಸ್ಥಳಗಳ ಸಂದರ್ಶನಕ್ಕಿಂತ ಹೆಚ್ಚಾಗಿ ಇಸ್ಲಾಮಿ ಹೃದಯಗಳನ್ನು ಹುಡುಕುವ ಕೆಲಸ ಮಾಡಿದೆ. ಎಲ್ಲೆಡೆಯಲ್ಲೂ ಅಂತಹ ಸಹೃದಯ ತುಂಬಿ ತುಳುಕಾಡುತ್ತಿತ್ತು. ಪ್ರತಿಯೊಬ್ಬ ಮುಸ್ಲಿಮನೂ ಇಸ್ಲಾಮಿನ ವಿಶಿಷ್ಟ ಗುಣಗಳನ್ನು ಮೈಗೂಡಿಸಿ ಸಾರಿ ಹೇಳುವಂತೆ ಭಾಸವಾಗುತ್ತಿತ್ತು.

## ಇಸ್ಲಾಮ್ ಸ್ವೀಕಾರದ ತ್ವರೆ

ಪಾಕಿಸ್ತಾನಕ್ಕೆ ತಲುಪಿ ಮರಳುವ ತನಕ ಭಾಗವಹಿಸಿದ ಎಲ್ಲ ಸಭೆ-ಸಮಾರಂಭಗಳಲ್ಲಿಯೂ ಒಂದೇ ಪ್ರಶ್ನೆ ಮಾರ್ದನಿಸುತ್ತಿತ್ತು. ಇಸ್ಲಾಮಿನ ಬಗ್ಗೆ ಹೀಗೆ ಮಾತಾಡುವ ನೀವು, ಆ ಧರ್ಮವನ್ನು ಸ್ವಯಂ ಯಾಕೆ ಸ್ವೀಕರಿಸಿಲ್ಲ? ಹೈದರಾಬಾದ್‌ನ ಸಭೆಯೊಂದರಲ್ಲಿ ಭಾಷಣ ಮಾಡಿ ವೇದಿಕೆಯಿಂದ ಕೆಳಗಿಳಿದಾಗ ಓರ್ವ ವಯೋವೃದ್ಧರು ನನ್ನನ್ನು ಬಿಗಿದಪ್ಪಿದರು. ಅವರ ಕಂಪಿಸುತ್ತಿರುವ ಕೈಗಳೇ ವಾರ್ಧಕ್ಯವನ್ನು ಸೂಚಿಸುತ್ತಿದ್ದವು. ಬೇರೊಂದು ರೀತಿಯಲ್ಲಿ ಅವರು ಅದೇ ಪ್ರಶ್ನೆಯನ್ನು ಕೇಳಿದರು: "ನಾವು ಯಾವಾಗ ಸಾಯುವೆವೆಂದು ಯಾರಿಗೂ ತಿಳಿಯದು. ಸಾವು ಬರುವುದಕ್ಕಿಂತ ಮೊದಲು ನಾವು ಸನ್ಮಾರ್ಗಗಾಮಿಗಳಾಗಬೇಡವೇ?"

"ಅದಕ್ಕಾಗಿ ಶ್ರಮಿಸುತ್ತಲಿದ್ದೇನೆ. ನೀವೂ ದೇವನೊಡನೆ ಪ್ರಾರ್ಥಿಸಿರಿ" ನಾನು ಉತ್ತರಿಸಿದೆ.

ಪಾಕಿಸ್ತಾನದಲ್ಲಿ ಕಂಡು ಕೇಳಿದ ವಿಷಯಗಳನ್ನು ಇಲ್ಲಿ ವಿವರಿಸಬಯಸುವುದಿಲ್ಲ. ಅವು ಸಾಮಾನ್ಯ ವಿಷಯಗಳಾಗಿವೆ. ನನ್ನ ಮೇಲೆ ಹೊರಿಸಲಾದ ಆ ಪ್ರಶ್ನೆಯ ಭಾರವೇ ಪಾಕಿಸ್ತಾನದ ಸಂಚಾರದಿಂದ ನನಗಾದ ಲಾಭ. ಪಾಕಿಸ್ತಾನದಿಂದ ನಿರ್ಗಮಿಸುವುದಕ್ಕಿಂತ ಮುಂಚೆ ಆಂಗ್ಲ ಪತ್ರಿಕೆ 'ಡಾನ್'ಗೆ ನೀಡಿದ ಸಂದರ್ಶನದಲ್ಲಿ ನನ್ನ ಮನೋಗತವನ್ನು ಜಾಹೀರುಪಡಿಸಿದೆ. "ಇಸ್ಲಾಮಿ ಹಾದಿಯಲ್ಲಿ ಕಾಲಿರಿಸಲಿಕ್ಕಾಗಿ ನನ್ನನ್ನು ಶುದ್ಧ ಗೊಳಿಸುತ್ತಿದ್ದೇನೆ. ಈಗ ನಾನು ಶುದ್ಧೀಕರಣದ ಕೊನೆಯ ಹಂತದಲ್ಲಿದ್ದೇನೆ."

ತಮಿಳ್ನಾಡಿಗೆ ಮರಳಿದ ಬಳಿಕ ಮುಸ್ಲಿಮರು ಏರ್ಪಡಿಸಿದ ಪ್ರವಾದಿ ದಿನಾಚರಣೆಯ ಅನೇಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿದೆ. ಸಭೆಗಳಲ್ಲಿ ಭಾಷಣ ಮಾಡಲಿಕ್ಕಾಗಿ ಧಾರಾಳ ಓದಬೇಕಾಗಿತ್ತು. ಕೇವಲ ಓದು ಮತ್ತು ಭಾಷಣಕ್ಕೆ ಸೀಮಿತವಾಗದೆ ಅವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದೆ. ಅದರೊಂದಿಗೆ ಇನ್ನೊಂದು ಕೆಲಸವೂ ಸೇರಿಕೊಂಡಿತು. ಹಿಂದೂ ಕ್ರೈಸ್ತ ಬಂಧುಗಳು ಮನೆಗೆ ಬಂದು ಇಸ್ಲಾಮಿನ ಬಗ್ಗೆ ಹಲವು ಬಗೆಯ ಪ್ರಶ್ನೆಗಳನ್ನು ಕೇಳುತ್ತಿದ್ದರು. ಸಂವಾದ ನಡೆಸುತ್ತಿದ್ದರು. ಆ ಸಂವಾದದ ಫಲವಾಗಿ ಅನೇಕ ಮಂದಿ ಇಸ್ಲಾಮಿನ ಹಿತೈಷಿಗಳಾಗಿದ್ದಾರೆ.

## ಎರಡು ಲೋಕ

ತರುವಾಯ ಮಲೇಶ್ಯಾ ಮತ್ತು ಸಿಂಗಾಪುರಕ್ಕೆ ಹೋದೆ. ಹೆಚ್ಚಿನ ಮುಸ್ಲಿಮ್ ಬಾಂಧವರು ಇಸ್ಲಾಮಿ ಮನಸ್ಸಿನ ಸುಂದರ ದೃಶ್ಯಗಳನ್ನು ಪ್ರತಿಬಿಂಬಿಸಿದರು. ಅವರ ನಿಸ್ವಾರ್ಥ ವರ್ತನೆ, ನಾನು ಪಾರಾಯಣ ಮಾಡಿದ ಇಸ್ಲಾಮಿ ತತ್ವಾದರ್ಶಗಳ ಜ್ವಲಂತ

ನಿದರ್ಶನವಾಗಿತ್ತು. ಸಿಂಗಾಪುರ ಮತ್ತು ಮಲೇಶ್ಯಾ ಸಂದರ್ಶನದಿಂದ ಎರಡು ವಿಭಿನ್ನ ಲೋಕವನ್ನು ಸಂಧಿಸಿದಂತಾಯಿತು. ಸಿಂಗಾಪುರದಲ್ಲಿ ನಾನು ಸಂಪೂರ್ಣವಾಗಿ ಮುಸ್ಲಿಮರ ಜತೆಗಿದ್ದೆ. ಮಲೇಶ್ಯಾದಲ್ಲಿ ವಿವಿಧ ಸಮೂಜದವರೊಡನೆ ಬೆರೆತೆ. ಅವೆರಡರ ಅಂತರ ವ್ಯಕ್ತವಾಯಿತು. ಮುಸ್ಲಿಮರೊಡನಿದ್ದಾಗ ನಯನ ಮನೋಹರವಾದ ವೃಂದಾವನದಲ್ಲಿ ವಿಹರಿಸಿದಂತಾಗುತ್ತಿತ್ತು. ಇತರರ ಜತೆಗಿದ್ದಾಗ ಅಲ್ಲಲ್ಲಿ ಒಂಟಿ ಹೂಗಳಿರುವ ಹೆದ್ದಾರಿಯಲ್ಲಿ ನಡೆದಂತೆನಿಸುತ್ತಿತ್ತು. ಈ ಸನ್ನಿವೇಶದಲ್ಲಿ, ಸಿಂಗಾಪುರದಲ್ಲಿ ನಾನು ಉಚ್ಚ ಸ್ವರದಿಂದ ಘೋಷಿಸಿದೆ: "ನನ್ನ ಇಸ್ಲಾಮ್ ಈಗ ಗರ್ಭಾವಸ್ಥೆಯಲ್ಲಿದೆ. ನಾನು ಹೆರಿಗೆ ಸನ್ನಿಹಿತವಾದ ಗರ್ಭಿಣಿಯ ಸ್ಥಿತಿಯಲ್ಲಿದ್ದೇನೆ. ಶೀಘ್ರದಲ್ಲಿಯೇ ಹೆರಿಗೆಯಾಗುವುದು."

## ಇಸ್ಲಾಮ್ ಸ್ವೀಕಾರ

ತಮಿಳ್ನಾಡಿಗೆ ಹಿಂತಿರುಗಿದ ಬಳಿಕ, ಕೇವಲ ಇಸ್ಲಾಮನ್ನೇ ಗುರಿಯಾಗಿಟ್ಟು ನನ್ನ ರಥವನ್ನು ಚಲಾಯಿಸತೊಡಗಿದೆ. ನನ್ನ ಇಸ್ಲಾಮ್ ಸ್ವೀಕಾರಕ್ಕಿಂತ ಮುಂಚೆ ಒಂದು ಘಟನೆ ಸಂಭವಿಸಿತು. 'ನನ್ನ ಪ್ರೀತಿಯ ಧರ್ಮ' ಪುಸ್ತಕದ ಹಿಂದೀ ಅನುವಾದವನ್ನು ಓದಿದ ಉತ್ತರ ಭಾರತದ ಅಭಿಮಾನಿಯೋರ್ವರು ಅದಾಗಲೇ ಇಸ್ಲಾಮ್ ಸ್ವೀಕರಿಸಿದ್ದರು. ಅವರು ವಿವಿಧೆಡೆಗಳಲ್ಲಿ ಸಂಚರಿಸಿದ ಬಳಿಕ ನನ್ನನ್ನು ಭೇಟಿಯಾದರು. ನನ್ನನ್ನು ಕಂಡ ಕೂಡಲೇ ಕೇಳಿದರು: "ನಮ್ಮನ್ನು ಇಸ್ಲಾಮಿಗೆ ಆಕರ್ಷಿಸುವ ತೆರದಲ್ಲಿ ಪುಸ್ತಕ ಬರೆಯುತ್ತಿರುವ ನೀವು ಸ್ವಯಂ ಆ ಧರ್ಮವನ್ನು ಈ ತನಕ ಏಕೆ ಅಂಗೀಕರಿಸಿಲ್ಲ?" ಇದು ನನ್ನ ಮಟ್ಟಿಗೆ ಪ್ರಶ್ನೆಯಾಗಿರಲಿಲ್ಲ! ನನ್ನ ಹೃದಯಕ್ಕೆ ನಾಟಿದ ಬಾಣವಾಗಿತ್ತು! ದಿನಂಪ್ರತಿ ಆ ಪ್ರಶ್ನೆ ನನ್ನನ್ನು ಕಾಡುತ್ತಿತ್ತು.

ಹೀಗೆ ಹೃದಯವು ಶರಪಂಜರವಾಯಿತು. ಆ ನೋವಿನಿಂದಲೇ ಅದೊಂದು ರಾತ್ರಿ (5-6-87) ನಾನು ಮಲಗಿ ನಿದ್ರಿಸಿದೆ. ಆ ನಿದ್ರೆಯಲ್ಲಿ ಪವಿತ್ರ ವಚನವನ್ನು ಉಚ್ಚರಿಸಿ ಇಸ್ಲಾಮ್ ಸ್ವೀಕರಿಸಿದ ಕನಸು ಕಂಡೆ. ಮರುದಿನ(6-6-87) ಮದರಾಸಿನ ಮಲ್‌ಮೂರ್ ಮಸೀದಿಗೆ ಹೋಗಿ ಇಸ್ಲಾಮಿ ಹಾದಿಯಲ್ಲಿ ಪ್ರವೇಶಿಸಿ ಅಬ್ದುಲ್ಲಾ ಎಂಬ ಹೆಸರಿಟ್ಟೆ. ಕೇವಲ ಈ ಆಗು-ಹೋಗುಗಳು ನನ್ನನ್ನು ಇಸ್ಲಾಮಿಗೆ ಸೇರಿಸಿತೆನ್ನಲಾಗದು. ಇಸ್ಲಾಮಿನ ತತ್ವಾದರ್ಶ ಮತ್ತು ಆಚಾರ ಕ್ರಮಗಳು ನನ್ನ ಮನಸೆಳೆದ ಬಗೆಯನ್ನು ಮುಂದೆ ಓದುವಿರಂತೆ.

---

# ಏಕದೇವ ಸಿದ್ಧಾಂತ

ಇಸ್ಲಾಮ್, ವಿವಿಧ ಕಾರಣಗಳಿಂದ ನನ್ನನ್ನು ಆಕರ್ಷಿಸಿದೆ. ಪ್ರಥಮತಃ ಅದರ ಏಕದೇವ ಸಿದ್ಧಾಂತ(ತೌಹೀದ್). ನಾಸ್ತಿಕ ಮತ್ತು ವಿಚಾರವಾದೀ ದ್ರಾವಿಡ ನಾಯಕರು ಬಹುದೇವ ಸಿದ್ಧಾಂತವನ್ನು ಕಟುವಾಗಿ ವಿರೋಧಿಸುತ್ತಿದ್ದರು. ಅವರು ದೇವತೆಗಳ ಕಟ್ಟುಕಥೆಗಳನ್ನು ಗೇಲಿ ಮಾಡುತ್ತಿದ್ದರು. ಈ ವಿಚಾರವಾದಿಗಳಲ್ಲಿ ಅಣ್ಣಾದೊರೈಯವರು ಮೊತ್ತಮೊದಲಾಗಿ "ಒಂದೇ ದೇವರು, ಒಂದೇ ಕುಲ" ಎಂಬ ಸಿದ್ಧಾಂತವನ್ನು ಮೊಳಗಿಸಿದರು. ಆ ಸಿದ್ಧಾಂತ ನನಗೆ ಸಂಪೂರ್ಣ ಸಿಂಧುವೆನಿಸಿತು. ಪ್ರಪಂಚ ಹಾಗೂ ಗೋಳಗಳ ಚಲನೆಯನ್ನು ತಿಳಿಯುವ ತನಕ ನಾಸ್ತಿಕ ವಿಚಾರವಾದವು ಅಪ್ಯಾಯಮಾನವಾಗಿ ಕಂಡಿತು.

ಗೋಳಗಳು ಹೇಗೆ ಹುಟ್ಟಿದವು? ಅವು ಹೇಗೆ ಚಲಿಸುತ್ತವೆ? ಅವುಗಳ ಸುವ್ಯವಸ್ಥಿತ ಭ್ರಮಣದ ಮರ್ಮವೇನು? ಗೋಳಗಳಾಚೆ ಏನಿದೆ? ಇಂತಹ ಸಹಸ್ರಾರು ಪ್ರಶ್ನೆಗಳು ಉದ್ಭವಿಸಿದಾಗ ನಾಸ್ತಿಕ-ವಿಚಾರವಾದಿಗಳು ವಿಜ್ಞಾನಿಗಳಿಗೆ ಶರಣಾದರು. ಆದರೆ ಆ ವಿಜ್ಞಾನಿಗಳ ಸ್ಥಿತಿ ಹೇಗಿತ್ತು? ಅವರು ಆರಂಭದಲ್ಲಿ ತಪ್ಪು ಸಿದ್ಧಾಂತಗಳನ್ನು ಸಮರ್ಪಿಸಿ, ಕ್ರಮೇಣ ಅವುಗಳನ್ನು ನಿರಾಕರಿಸಿದ್ದರು. ಮೊದಲು ಭೂಮಿ ಚಪ್ಪಟೆಯಾಗಿದೆಯೆಂದು ಹೇಳಿದರು. ತರುವಾಯ ಭೂಮಿ ಉರುಟಾಗಿದೆಯೆಂದು ಕಂಡು ಹಿಡಿದರು. ಸೂರ್ಯನು ಭೂಮಿಗೆ ಪ್ರದಕ್ಷಿಣೆ ಬರುತ್ತಿದೆಯೆಂದು ಮಹಾ ವಿಜ್ಞಾನಿಗಳೇ ಭಾವಿಸಿದ್ದರು. ಅಣುವಿನ ವಿಭಜನೆ ಅಸಾಧ್ಯವೆಂದು ನ್ಯೂಟನ್ ಹೇಳಿದ್ದನು.

## ನಾಸ್ತಿಕ ಸಿದ್ಧಾಂತದ ದೌರ್ಬಲ್ಯ

"ಪ್ರಪಂಚವನ್ನು ದೇವನು ಸೃಷ್ಟಿಸಿದ್ದಾನೆ" ಎಂದ ಕೂಡಲೇ ನಾಸ್ತಿಕರು ಸಾಮಾನ್ಯವಾಗಿ ನೀವು ನೋಡಿದ್ದೀರಾ ಎಂದು ಪ್ರಶ್ನಿಸುತ್ತಾರೆ. ಆದರೆ ಅವರು ನಂಬುವ ವಿಜ್ಞಾನಿಗಳು ಹೇಳುವ ಕಥೆಗಳನ್ನು ಓದುವಾಗಲೂ ಆ ಪ್ರಶ್ನೆ ಪ್ರಸ್ತುತವಾಗುತ್ತದೆ. ಸೂರ್ಯನಿಂದ ಭೂಮಿ ಹುಟ್ಟಿತು. ಭೂಮಿಯಿಂದ ಚಂದ್ರ ಹೋಳಾಯಿತು! ಮೊದಲು ಮಳೆ! ಅನಂತರ ಬಂಡೆಗಳು! ಅಣು! ಅದರಿಂದ ಜೀವಿಗಳು ವಿಕಾಸಗೊಂಡವು. ವಿಕಾಸದಿಂದ ಮಂಗ ಹುಟ್ಟಿತು! ಮಂಗನಿಂದ ಮನುಷ್ಯ! ಈ ಸ್ಥಿತ್ಯಂತರಗಳ ಬಗ್ಗೆ ಹೇಳಿದಾಗ ನೀವು ನೋಡಿದ್ದೀರಾ ಎಂಬ ಪ್ರಶ್ನೆ ಸಂಗತವಾಗುತ್ತದೆ. ಸೂರ್ಯನಿಂದ ಭೂಮಿ ಹುಟ್ಟಿರುವುದಾದರೆ ಮಾನವಾರಂಭದಿಂದ ಈ ತನಕ ಇನ್ನೊಂದು ಭೂಮಿ ಸಿಡಿಯಲಿಲ್ಲವೇಕೆ? ಭೂಮಿಯಲ್ಲಿ ಏಕಾಣು ಜೀವಿಯು ವಿಕಾಸ ಹೊಂದಿ ಮಂಗವಾಗಿ, ಅದರ ವಿಕಾಸದಿಂದ ಮಾನವನಾಗಿದ್ದರೆ, ಮಾನವನಿಂದ ಇತರ ಜೀವಿಗಳು ಈ ತನಕ ವಿಕಾಸವಾಗಿಲ್ಲವೇಕೆ? ಭವಿಷ್ಯದಲ್ಲಿಯಾದರೂ ವಿಕಾಸವಾಗಬಹುದೇ? ಇಂತಹ

ನೂರಾರು ಪ್ರಶ್ನೆಗಳು ಮನದಲ್ಲಿ ಸುಳಿದಾಡುವಾಗ ನಾಸ್ತಿಕರು ವಿಚಲಿತರಾಗುವುದನ್ನು ನಾನು ಕಂಡಿದ್ದೇನೆ.

ಅದೇ ವೇಳೆ ನಾಸ್ತಿಕರು ನಂಬುವ ಅನೇಕ ವಿಜ್ಞಾನಿಗಳು ಸ್ವಯಂ ಆಸ್ತಿಕರೆಂಬುದು ಸ್ವಾರಸ್ಯಕರ. ಆದ್ದರಿಂದ ನನ್ನಂಥವರು ಅಖಿಲ ವಿಶ್ವವನ್ನು ನಿಯಂತ್ರಿಸುವ ಮಹಾಶಕ್ತಿ ಒಂದಿದೆಯೆಂಬ ನಿರ್ಧಾರಕ್ಕೆ ಬರಬೇಕಾಗುತ್ತದೆ. ವಿಶ್ವದ ಮಾತು ಹಾಗಿರಲಿ. ನಾವು ಬದುಕುವ ಈ ಭೂಮಿಯ ಸ್ಥಿತಿ, ಋತುಭೇದ, ಜೀವಜಾಲಗಳ ರಚನೆ ಇತ್ಯಾದಿಗಳಲ್ಲಿ ಸುಂದರ ಕಾನೂನು ವ್ಯವಸ್ಥೆ ವ್ಯಕ್ತವಾಗುತ್ತದೆ. ಆ ಬಗ್ಗೆ ಪ್ರಶ್ನಿಸಿದರೆ ನಾಸ್ತಿಕರು 'ನಿಸರ್ಗ ನಿಯಮ'ವೆಂದು ಸುಲಭದಲ್ಲಿ ಹೇಳಿ ಬಿಡುತ್ತಾರೆ. ನಿಸರ್ಗ(Nature)ವೆಂದರೆ ಅಸ್ಥಿರವೆಂದರ್ಥವಲ್ಲ. ನೆಲೆ ನಿಲ್ಲುವಂತಹದ್ದು-ಬದಲಾವಣೆಯಿಲ್ಲದೆ ಮುಂದುವರಿಯುವಂತಹದ್ದು ಎಂದರ್ಥ. ಹಾಗಿದ್ದರೆ, ನೆಲೆನಿಲ್ಲಬೇಕಾಗಿದ್ದ ಅನೇಕ ಚರಾಚರಗಳು ಅಳಿದುದೇಕೆ? ನಾಸ್ತಿಕ ವಿಜ್ಞಾನಿಗಳು(ಡಾರ್ವಿನ್) ಅರ್ಹವಾದುದು ಸ್ವಯಂ ಬದುಕುವುದೆಂದು ಹೇಳುತ್ತಾರೆ. ಆದರೆ ಅಳಿದವುಗಳ ಚರಿತ್ರೆಯನ್ನು ಅವಲೋಕಿಸಿದರೆ, ಅವುಗಳಲ್ಲಿ ಹಲವು ಈಗ ಬದುಕಿರುವವುಗಳನ್ನು ಹೋಲುತ್ತವೆ.

ಹುಲಿಗಳಿಗೆ ಬಲಿಯಾಗುವ ಜಿಂಕೆ, ಆ ಜಿಂಕೆಗಳನ್ನು ಬೇಟೆಯಾಡುವ ಹುಲಿಗಳು ಅಳಿಯುತ್ತವೆಯೆಂಬ ತತ್ವ ಅದಕ್ಕಿಂತ ಸ್ವಾರಸ್ಯಕರವಾಗಿದೆ. ಮಾನವನು ತನಗೆ ವಿಧೇಯವಾಗುವ ಪ್ರಾಣಿಗಳನ್ನು ಸಾಕುತ್ತಾನೆ. ವೈರವಿರುವವುಗಳನ್ನು ನಾಶಪಡಿಸುತ್ತಾನೆ. ಈ ಪ್ರಕ್ರಿಯೆಯು ನಾಸ್ತಿಕ ಸಿದ್ಧಾಂತದ ದೌರ್ಬಲ್ಯವನ್ನು ಎತ್ತಿ ತೋರಿಸುತ್ತದೆ. ಹೀಗೆ ಅನೇಕ ನಾಸ್ತಿಕವಾದಗಳು ನನ್ನ ಅಂತರಂಗದಲ್ಲಿ ಸಾಯತೊಡಗಿದವು. ತಿಳುವಳಿಕೆ ಹೆಚ್ಚಿದಂತೆ ಮಾನವನು ನಾಸ್ತಿಕನಾಗುವನೆಂಬ ಭಾವನೆ ಬಾಲಿಶವಾದುದು. ಸ್ಪಷ್ಟ ತಿಳುವಳಿಕೆ ದೊರೆತರೆ ನಾಸ್ತಿಕವಾದ ಅಳಿಯುವುದೇ ದಿಟ.

## ಕೊಳೆತ ಬೀಜ

ಇನ್ನು ನಾವು ಆಸ್ತಿಕವಾದಿಗಳನ್ನು ನೋಡೋಣ. ಅವರು ನಾಸ್ತಿಕರ ವಿರುದ್ಧ ವಾದಿಸುವಾಗ 'ಒಂದು ನಿಯಂತ್ರಕ ಶಕ್ತಿ'ಯಿದೆಯೆಂದು ಮನೋಜ್ಞವಾಗಿ ತರ್ಕಿಸುತ್ತಾರೆ. ಅದನ್ನು ಹೌದೆಂದು ಒಪ್ಪಿಕೊಂಡ ಬಳಿಕ ಏನಾಗುವುದು? ಮೂರು, ನಾಲ್ಕು, ಐದು ಹೀಗೆ ಅವರು ದೇವಂದಿರ ಸಂಖ್ಯೆಯನ್ನು ಜನಸಂಖ್ಯೆಗಿಂತ ಹೆಚ್ಚಿಸುತ್ತಾರೆ. ಮಾನವರು, ಪ್ರಾಣಿಗಳು, ಜೀವಿಗಳು, ನಿರ್ಜೀವಿಗಳು ಎಲ್ಲವೂ ದೇವರು! ತರುವಾಯ ಪ್ರಧಾನ ದೇವನ ಬಗ್ಗೆ ಘೋರ ಸಂಘರ್ಷ, ಅನಂತರ ತಮ್ಮ ಇಷ್ಟ ದೇವತೆಗಳ ಮಹಾತ್ಮೆಯನ್ನು ಹೆಚ್ಚಿಸಲಿಕ್ಕಾಗಿ ಕಥೆ, ಪುರಾಣಗಳನ್ನು ರಚಿಸುತ್ತಾರೆ. ಇದರಿಂದ ಇನ್ನೊಂದು ದುರಂತ ಸಂಭವಿಸುತ್ತದೆ. ತಮ್ಮ ದೇವರ ಸ್ಥಾನವನ್ನು ಉತ್ತುಂಗಗೊಳಿಸಲಿಕ್ಕಾಗಿ ಅನ್ಯರ ದೇವರ ಬಗ್ಗೆ ನೀಚ ಕಥೆಗಳನ್ನು ಹೆಣೆಯುವುದು. ಈ ಮಿಥ್ಯ ಕಥೆಗಳ ಪರಿಣಾಮವೇನು? ಇದರಿಂದಾಗಿ ದೇವ ವಿಶ್ವಾಸವೇ ಕಟ್ಟು ಕಥೆಯಾಗುವುದು. ಒಟ್ಟಿನಲ್ಲಿ, ಬಹುದೇವ ಸಿದ್ಧಾಂತದಲ್ಲಿ ದೇವ ವಿಶ್ವಾಸವನ್ನೇ ಅಳಿಸಿ ಬಿಡುವಂತಹ ಕೊಳೆತ ಬೀಜಗಳಿವೆಯೆಂದು ವ್ಯಕ್ತವಾಗುತ್ತದೆ.

----

# ಲಾ ಇಲಾಹ ಇಲ್ಲಲ್ಲಾಹ್

'ಲಾ ಇಲಾಹ ಇಲ್ಲಲ್ಲಾಹ್' ಏಕದೇವನಾದ ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲವೆಂದು ಇಸ್ಲಾಮ್ ಸಾರಿ ಹೇಳುತ್ತದೆ. ಈ ಸತ್ಯ ವಚನದಲ್ಲಿ ಎರಡು ಅಂಶಗಳಿವೆ. ಮೊದಲು ಇದು ಬಹುದೇವಾರಾಧನೆಯನ್ನು ನಿರಾಕರಿಸುತ್ತದೆ. ಎರಡನೆಯದಾಗಿ ಏಕದೇವಾರಾಧನೆಯನ್ನು ದೃಢೀಕರಿಸುತ್ತದೆ. ಮತ್ತಷ್ಟು ಗಹನವಾಗಿ ಆಲೋಚಿಸಿದರೆ, 'ಲಾ ಇಲಾಹ ಇಲ್ಲಲ್ಲಾಹ್' ಎಂದರೆ ಅನ್ಯ ದೇವರಿಲ್ಲವೆಂದು ಮಾತ್ರವಲ್ಲದೇ ಏಕದೇವನಿಗಿಂತ ಉನ್ನತವಾದ ಯಾವ ಶಕ್ತಿಯೂ ಇಲ್ಲವೆಂದು ಸ್ಪಷ್ಟವಾಗುತ್ತದೆ. ಅಗ್ನಿ, ಗಾಳಿ, ನೀರು ಇತ್ಯಾದಿ ಶಕ್ತಿಗಳಿರಲಿ; ಸರಕಾರ, ಕಾನೂನು, ಸೇನೆ, ಪೊಲೀಸ್ ಇತ್ಯಾದಿ ಬಲವಿರಲಿ; ಖಡ್ಗ, ಬಿಲ್ಲುಬಾಣ, ಬಂದೂಕು, ಬಾಂಬು, ಅಣುಬಾಂಬು ಮುಂತಾದ ಮಾರಣಾಂತಿಕ ಶಕ್ತಿಗಳಿರಲಿ; ಆಧುನಿಕ ಯಂತ್ರ, ವಿಜ್ಞಾನ, ಬಿರುದು ಬಾವಲಿ ಇತ್ಯಾದಿ ಯಾವುದೇ ಪ್ರಾಪಂಚಿಕ ಶಕ್ತಿಗಳೇ ಇರಲಿ, ಅವು ನಿಜವಾದ ಶಕ್ತಿಗಳಲ್ಲ. ಅವು ಪರಮೋಚ್ಚವಲ್ಲ. ಏಕದೇವ ಶಕ್ತಿಯೇ ಪರಮೋಚ್ಚವೆಂದು ಈ ವಚನವು ಸಾರಿ ಹೇಳುತ್ತದೆ.

ಅಗ್ನಿ, ಗಾಳಿ, ನೀರು ಇತ್ಯಾದಿ ಶಕ್ತಿಗಳು ಮಿತಿ ಮೀರಿದಾಗ ಅವು ಪ್ರಚಂಡ ಶಕ್ತಿಗಳೆಂದು ಭಾಸವಾಗುತ್ತದೆ. ಆದರೆ ಅವುಗಳಿಗೆ ನಂದಿ ಹೋಗುವ, ಶಾಂತವಾಗುವ ಮತ್ತು ಬತ್ತಿ ಹೋಗುವ ಮರಣಗಳಿವೆ. ಮರಣವಿರುವವುಗಳು ಮಹಾಶಕ್ತಿಯಾಗಲಾರವು.

ಸರಕಾರ, ಪೊಲೀಸ್, ಕಾನೂನು ಇತ್ಯಾದಿಗಳು ಜನರನ್ನು ಶಿಸ್ತುಬದ್ಧವಾಗಿರಿಸುವ ಶಕ್ತಿಗಳಾಗಿರುವ ತನಕ ಅಡಚಣೆಯಿಲ್ಲದೆ ಮುಂದೆ ಸಾಗುತ್ತವೆ. ಆದರೆ ಅವು ಮರ್ದಕ ಶಕ್ತಿಗಳಾದಾಗ ಧೂಳೀಪಟವಾದ ಘಟನೆಗಳನ್ನು ಇತಿಹಾಸವು ಎತ್ತಿ ಹೇಳಿದೆ. ಆದ್ದರಿಂದ ವಿಚ್ಛಿನ್ನವಾಗುವವುಗಳು ಆಧಾರ ಶಕ್ತಿಗಳಾಗಲಾರವು. ಖಡ್ಗ, ಬಿಲ್ಲು, ಬಾಣ, ಬಂದೂಕು, ಬಾಂಬು, ಅಣುಬಾಂಬು ಇತ್ಯಾದಿಗಳು ಮಾರಕವಾಗಿವೆ. ಆದರೆ ಈ ಆಯುಧಗಳು ನಿರಾಯುಧ ಜನರ ಮುಂದೆಯೇ ನಿಷ್ಫಲವಾದುದನ್ನು ಚರಿತ್ರೆ ಕಂಡಿದೆ. ಆದ್ದರಿಂದ ನಿಷ್ಫಲವಾಗುವವುಗಳಿಗೆ ಮಹಾ ಶಕ್ತಿಯಾಗುವ ಯೋಗ್ಯತೆಯಿಲ್ಲ.

ಜನ ಬಲ, ಸಂಪತ್ತು, ಆಯುಧಗಳಿರುವ ಸಾಮ್ರಾಜ್ಯ ಮತ್ತು ಸರಕಾರಗಳು ಎವೆಯಿಕ್ಕುವಷ್ಟರಲ್ಲಿ ಮಣ್ಣುಮುಕ್ಕಿವೆ. ಆ ಸಾಮ್ರಾಜ್ಯಗಳ ಕೋಟೆಕೊತ್ತಲಗಳ ಭಗ್ನಾವಶೇಷಗಳು ಇಂದಿಗೂ ಸ್ಮಾರಕವಾಗಿ ಉಳಿದುಕೊಂಡಿವೆ. ನಾಶವಾಗುವವುಗಳು ದೇವರಾಗಲಾರವು. ವೈಜ್ಞಾನಿಕ ಸಂಶೋಧನೆಗಳನ್ನು ಮಹಾ ಶಕ್ತಿಯೆಂದು ಭಾವಿಸಲಾಗುತ್ತಿದೆಯಾದರೂ ಅವುಗಳ ವೈಫಲ್ಯ, ಅಪರ್ಯಾಪ್ತಿಯು ಅವುಗಳಿಗಿಂತ ಮಿಗಿಲಾದ ಒಂದು ಶಕ್ತಿಯಿದೆಯೆಂದು ಸ್ಪಷ್ಟಪಡಿಸುತ್ತದೆ. ವೈಫಲ್ಯಗಳು ವಿರಾಟ್ ಶಕ್ತಿಗಳಿಗೆ ಭೂಷಣವಲ್ಲ. ಶಿಕ್ಷಣ ಮತ್ತು ವಿಜ್ಞಾನವೂ ಒಂದು

ಶಕ್ತಿಯೆನಿಸಬಹುದು. ಆದರೆ ಅನೇಕ ಶಿಕ್ಷಣ ತಜ್ಞರು ಮತ್ತು ವಿಜ್ಞಾನಿಗಳು, ಅವರ ಅಜ್ಞಾನಕ್ಕಾಗಿ ಅನಂತರದ ಕಾಲಗಳಲ್ಲಿ ಅವಹೇಳನಕ್ಕೆ ಗುರಿಯಾಗಿದ್ದಾರೆ. ಕೆಲವರು ಜೀವನಾವಧಿಯಲ್ಲಿಯೇ ಪ್ರಶಸ್ತಿ ಗೌರವಗಳನ್ನು ಕಳೆದುಕೊಂಡಿದ್ದಾರೆ. ಅನೇಕ ಮಂದಿ ಮರಣೋತ್ತರ ನಿಂದೆಗೀಡಾಗಿದ್ದಾರೆ. ಆದ್ದರಿಂದ ಜಗತ್ತಿನಲ್ಲಿರುವ ಯಾವ ಶಕ್ತಿಯೂ ಸ್ವಯಂಪೂರ್ಣವಲ್ಲ. ಅವು ಅಪೂರ್ಣವಾಗಿವೆ. ಅವು ನೈಜ ಶಕ್ತಿಯಲ್ಲವೆಂದು 'ಲಾ ಇಲಾಹ ಇಲ್ಲಲ್ಲಾಹ್' ಎಂಬ ಸತ್ಯವಚನ ಸ್ಪಷ್ಟಪಡಿಸುತ್ತದೆ. ಈ ಸತ್ಯ ವಚನವನ್ನು ನಾನು ಅರ್ಥಸಹಿತ ಮನಃಪೂರ್ವಕವಾಗಿ ಉಚ್ಚರಿಸಿದಾಗ ನನಗೆ ಎರಡು ರೀತಿಯಿಂದ ಪ್ರಯೋಜನವಾಯಿತು. ಪ್ರತಿಕ್ಷಣವೂ ಲೌಕಿಕ ಶಕ್ತಿಗಳಿಗೆ ಹೆದರಿ ನಡುಗುತ್ತಿದ್ದ ನನ್ನ ಹೃದಯವು ಆ ಸತ್ಯವಚನದಿಂದಾಗಿ ನಿರ್ಭೀತವಾಯಿತು. ಅದೇ ವೇಳೆ ಇನ್ನೊಂದು ಭೀತಿಯು ಪ್ರತ್ಯಕ್ಷವಾಯಿತು. ಅದೇ ದೇವಭಯ. ಹೀಗೆ ಕೇವಲ ಆ ಏಕದೇವನ ಭಯದಿಂದ ಜೀವಿಸಲು ನಾನು ಸಿದ್ಧನಾದೆ.



# ಮುಹಮ್ಮದುರ್‍ರಸೂಲುಲ್ಲಾಹ್

ಸತ್ಯ ವಚನದ ಉತ್ತರಾರ್ಧದಲ್ಲಿ 'ಮುಹಮ್ಮದುರ್‍ರಸೂಲುಲ್ಲಾಹ್' ಎನ್ನಲಾಗಿದೆ. ಇದು ಮುಹಮ್ಮದ್‌ರು(ಸ) ಪ್ರವಾದಿಯೆಂಬ ಕೇವಲ ಹೇಳಿಕೆಯಲ್ಲ. ಅದು ದೇವಭಕ್ತಿಯಿಂದಾಗಿ ಇತರೆಲ್ಲ ಭಯದಿಂದ ನಿರ್ಭೀತರಾದವರು ಜಗತ್ತಿನಲ್ಲಿ ಹೇಗೆ ಬಾಳಬೇಕೆಂಬ ಪ್ರಶ್ನೆಯ ಉತ್ತರವಾಗಿದೆ. 'ಮುಹಮ್ಮದುರ್‍ರಸೂಲುಲ್ಲಾಹ್' ಎಂಬ ವಾಕ್ಯದಲ್ಲಿರುವ 'ರಸೂಲುಲ್ಲಾಹ್' ಎಂದರೆ ಮಾನವರ ಲೌಕಿಕ ಜೀವನಕ್ಕೆ ಅಗತ್ಯವಿರುವ ದೇವ ಕಾನೂನುಗಳನ್ನು ಅವರಿಗೆ ತಲಪಿಸಿದ ಪ್ರವಾದಿಯೆಂದರ್ಥ.

ಲೌಕಿಕ ಜೀವನದ ಕಾನೂನುಗಳನ್ನು ನಿರ್ಮಿಸಿದ ಅನೇಕ ಮಂದಿ ಇತಿಹಾಸದಲ್ಲಿ ಆಗಿ ಹೋಗಿದ್ದಾರೆ. ಕಾನೂನು ವಿದ್ಯಾರ್ಥಿಗಳಿಗೆ ಈ ವಿಚಾರ ಚೆನ್ನಾಗಿ ತಿಳಿದಿದೆ. ರೋಮನ್ ಸಂಹಿತೆ, ಮನು ಸಂಹಿತೆ, ಕನ್ಫ್ಯೂಶಿಯಸ್ ಸಂಹಿತೆಗಳಿಂದ ನಿಶೇ, ಹಿಟ್ಲರ್ ತನಕ ಹಲವರು ಹಲವು ರೀತಿಯ ಕಾನೂನುಗಳನ್ನು ರಚಿಸಿದ್ದಾರೆ. ಆ ಪೈಕಿ ಹಲವು ಕಾನೂನು ಸಂಹಿತೆಗಳು ನೆರೆಯಲ್ಲಿ ಕೊಚ್ಚಿಹೋಗುವ ಕಳೇಬರಗಳಂತಾದುವು. ಈ ಸಂಹಿತೆಗಳ ರಚನೆಗೆ ಅವರಲ್ಲಿ ಯಾವ ಯೋಗ್ಯತೆಯಿತ್ತು? ತಮ್ಮ ಸ್ವಂತ ಚಿಂತನೆಗಳಿಂದ ಈ ಕಾನೂನು ಸಂಹಿತೆಗಳನ್ನು ರಚಿಸಿದೆವೆಂದು ಅವರು ಹೇಳುತ್ತಾರೆ. ಆದರೆ ಪ್ರವಾದಿವರ್ಯರು(ಸ) ನೀಡಿದ ಕಾನೂನುಗಳು ಸ್ವಯಂಕೃತವಲ್ಲ. ಪ್ರವಾದಿ ಮುಹಮ್ಮದ್‌ರು(ಸ) ದಿವ್ಯವಾಣಿ(ವಹ್ಯ್)ಯೆಂಬ ದಿವ್ಯ ಸಂದೇಶದ ಮೂಲಕ ಲಭಿಸಿದ ಕಾನೂನುಗಳನ್ನು ನೀಡಿದರು. ದಿವ್ಯವಾಣಿಯ ಬೆಂಬಲವಿಲ್ಲದ ಕಾನೂನುಗಳು ಮಾನವ ಕೃತವಾಗಿವೆ. ದಿವ್ಯವಾಣಿಯನ್ನು ಹೊಂದಿರುವ ಕಾನೂನುಗಳು ಮಾತ್ರ ದೇವ ಕಾನೂನುಗಳಾಗುತ್ತವೆ. ದಿವ್ಯಜ್ಞಾನದಿಂದ ದೊರೆತ ದೇವ ಕಾನೂನುಗಳನ್ನು ಪ್ರವಾದಿ ಮುಹಮ್ಮದ್‌ರು(ಸ) ಜಗತ್ತಿಗೆ ತಲುಪಿಸಿದರು. ಅಂದ ಮಾತ್ರಕ್ಕೆ ಅವರ ಶ್ರೇಷ್ಠತೆ ಪೂರ್ಣವಾಗುವುದಿಲ್ಲ. ಹೇಗೆ ವಿಶ್ವಾಸವಿರಿಸಬೇಕು? ವಿಶ್ವಾಸಿಯು ದೇವಾರಾಧನೆಯನ್ನು ಹೇಗೆ ಮಾಡಬೇಕು. ಜನನದಿಂದ ಮರಣದ ತನಕ, ಎಚ್ಚೆತ್ತು ಪುನಃ ಮಲಗುವ ತನಕ ಪ್ರತಿಯೊಂದು ಕ್ಷಣದಲ್ಲಿಯೂ ಹೇಗಿರಬೇಕು? ಮಾನವರು ಮತ್ತು ಇತರ ಸಹಜೀವಿಗಳೊಂದಿಗೆ ಹೇಗೆ ವರ್ತಿಸಬೇಕು? ಹೀಗೆ ಜೀವನದ ಸರ್ವರಂಗಗಳಲ್ಲಿಯೂ ದೇವ ಕಾನೂನಿನಂತೆ ಬದುಕುವ ಮಾದರಿಯನ್ನು ಪ್ರವಾದಿ(ಸ) ತೋರಿಸಿಕೊಟ್ಟರು.

## ಉಜ್ವಲ ಮಾದರಿ

ದೇವ ನಿಯಮಗಳು ಕೇವಲ ಉಪದೇಶ ಅಥವಾ ಹಗಲುಗನಸುಗಳಲ್ಲ. ಕಾಲ್ಪನಿಕವಲ್ಲ. ಅವು ಎಂತಹ ಜನಸಾಮಾನ್ಯರೂ ಪಾಲಿಸಬಹುದಾದ ಕಾನೂನುಗಳೆಂದು ಸ್ವಜೀವನದಲ್ಲಿ ಸಾಧಿಸಿ ತೋರಿಸಿದ ಪ್ರವಾದಿವರ್ಯರನ್ನು(ಸ) ದೇವನು ಪವಿತ್ರ ಗ್ರಂಥದಲ್ಲಿ ಪ್ರಶಂಸಿಸಿದ್ದಾನೆ. "ವಿಶ್ವಾಸಿಗಳಿಗೆ ಪ್ರವಾದಿವರ್ಯರಲ್ಲಿ(ಸ) ಉಜ್ವಲ ಮಾದರಿಯಿದೆ." ಇಲ್ಲಿ ಕೇವಲ

ಮಾದರಿಯೆನ್ನದೆ ಉಜ್ವಲವೆಂದಿರುವುದು ಗಮನಾರ್ಹ. ಹೇಳಿಕೊಟ್ಟ ಪಾಠಗಳನ್ನು ಚಾಚೂ ತಪ್ಪದೆ ಕಲಿಯುವ ವಿದ್ಯಾರ್ಥಿಯನ್ನು ನೋಡಿದರೆ ಅಧ್ಯಾಪಕನಿಗೆ ಸಂತೋಷವಾಗುತ್ತದೆ. ಪ್ರವಾದಿ ಮುಹಮ್ಮದ್‌ರನ್ನು(ಸ) ಅಖಿಲ ವಿಶ್ವದ ಅನುಗ್ರಹವಾಗಿ ನೇಮಿಸಿರುವೆನೆಂದು ಅಲ್ಲಾಹನು ಸಾರಿದ್ದಾನೆ. ಅವನೇ ಪ್ರವಾದಿವರ್ಯರನ್ನು(ಸ) ಹೊಗಳುತ್ತಾನೆ. ದೇವಚರರು ಮತ್ತು ಮಾನವರು ಅವರ ಮೇಲೆ ಸಲಾತ್(ಶುಭಕೋರಿಕೆ) ಹೇಳಬೇಕೆಂದು ಆತನು ಆಜ್ಞಾಪಿಸಿದ್ದಾನೆ.

ಪ್ರವಾದಿವರ್ಯರು(ಸ) ತಮ್ಮ ಸಮಕಾಲೀನರನ್ನು ಮಾತ್ರವಲ್ಲದೇ ಅನಂತರದ ಕಾಲದವರನ್ನೂ ದೇವ ಕಾನೂನಿಗೆ ಬದ್ಧವಾಗಿ ಬಾಳುವ ನೈಜ ವಿಶ್ವಾಸಿಗಳಾಗಿ-ಸತ್ಯವಿಶ್ವಾಸಿಗಳಾಗಿ-ಮಾರ್ಪಡಿಸಿದರು. ದೇವನು ಅವರನ್ನು ಅಂತ್ಯ ಪ್ರವಾದಿ, ಪರಿಪೂರ್ಣ ಸಂದೇಶವಾಹಕ, ಅನುಗ್ರಹದ ಪ್ರವಾದಿ ಎಂದು ಕರೆದಿದ್ದಾನೆ. ಇದು ಅತ್ಯಂತ ಸ್ಪಷ್ಟವಾಗಿದೆ. ಜಾಗತಿಕ ಚರಿತ್ರೆಯು ಈ ವಾಸ್ತವಿಕತೆಯನ್ನು ದೃಢೀಕರಿಸುತ್ತದೆ. ಕೆಲವು ಪ್ರವಾದಿ ಮಹಾ ಪುರುಷರು, ತಾವು ದೇವನಿಂದ ಪಡೆದ ಕಾನೂನುಗಳಿಗೆ ವಿರುದ್ಧವಾಗಿ ವರ್ತಿಸುವ ಅನುಯಾಯಿ ವೃಂದವನ್ನು ಕಂಡು, ಕಾನೂನು ಸಂಹಿತೆಗಳನ್ನು ಎಸೆದು ಬಿಟ್ಟರೆಂದು ಇತಿಹಾಸವು ಹೇಳುತ್ತದೆ. ಯೇಸುಕ್ರಿಸ್ತರನ್ನು ಬಲಿ ನೀಡಲು ಅವರ ಓರ್ವ ಶಿಷ್ಯನೇ ಸನ್ನದ್ಧನಾದನು. ಯೇಸುಕ್ರಿಸ್ತರು ತಮ್ಮ ಶಿಷ್ಯರನ್ನು ಹಲವೊಮ್ಮೆ- "ಅಲ್ಪ ಮತಿಗಳೇ! ಶೈತಾನರೇ!" ಎಂದು ಕರೆದಿರುವರೆಂದು ಬೈಬಲ್ ಹೇಳುತ್ತದೆ.

ಆದರೆ, ಪ್ರವಾದಿವರ್ಯರು(ಸ) ತಮ್ಮ ಅನುಯಾಯಿಗಳಂತೆಯೇ, ಇತರ ಲಕ್ಷಾಂತರ ಮಂದಿಯನ್ನು, ದೇವ ಕಾನೂನುಗಳನ್ನು ಗೌರವಿಸಿ ಬಾಳುವಂತೆ ಮಾಡಿದರು. ಈ ಬಗ್ಗೆ ಅತ್ಯುಜ್ವಲ ಮಾದರಿಯೊಂದನ್ನು ನೋಡಿರಿ. ಮದ್ಯಪಾನ ನಿಷೇಧದ ದೇವಾಜ್ಞೆ ಅವತೀರ್ಣವಾಗಿದೆಯೆಂದು ತಿಳಿದ ಕೂಡಲೇ ಪಾನಕೂಟದಲ್ಲಿ ನಿರತರಾಗಿದ್ದವರು ಪಾತ್ರೆಗಳನ್ನು ಎಸೆದು ಬಿಟ್ಟರು. ಮನೆಯಲ್ಲಿದ್ದ ಮದ್ಯಕಡಾಯಿಗಳನ್ನು ಹೊರಗೆಸೆದು ನಾಶಪಡಿಸಿದರು. ಮದ್ಯವು ಮದೀನಾ ನಗರದ ಚರಂಡಿಗಳಲ್ಲಿ ಯಾರಿಗೂ ಬೇಡದ ಕೊಳಚೆಯಾಗಿ ಹರಿಯಿತು. ಇದನ್ನು ಸರಿಗಟ್ಟುವ ಘಟನೆ ಮಾನವೇತಿಹಾಸದಲ್ಲಿ ನಡೆದಿದೆಯೇ? ಹೀಗೆ ಯಾವ ವಿಷಯದಲ್ಲಿ ದೇವಾಜ್ಞೆ ಬಂದರೂ ತಕ್ಷಣವೇ ಅದನ್ನು ನಿಷ್ಠೆಯಿಂದ ಪಾಲಿಸುವಂತಹ ಅನುಯಾಯಿ ಸಂಕುಲವನ್ನು ಪ್ರವಾದಿವರ್ಯರು(ಸ) ಕಟ್ಟಿ ಬೆಳೆಸಿದರು. ಕೇವಲ ಆ ಕಾಲದಲ್ಲಿ ಮಾತ್ರವಲ್ಲ, ಅನಂತರ ಕಾಲದವರಲ್ಲಿಯೂ ಆ ನಿಷ್ಠೆಯನ್ನು ಉಳಿಸಿದರು. ಈ ಇಪ್ಪತ್ತನೇ ಶತಮಾನ ದಲ್ಲಿಯೂ ತಮಿಳ್ನಾಡಿನ ಅನೇಕ ಮುಸ್ಲಿಮ್ ಜನನಿಬಿಡ ಪ್ರದೇಶಗಳಲ್ಲಿ ಆರಕ್ಷಕ ಠಾಣೆಗಳಿಲ್ಲ. ಈ ವಾಸ್ತವಿಕತೆ ಏನನ್ನು ಸೂಚಿಸುತ್ತದೆ? ಅದೇ ವೇಳೆ ಠಾಣೆಗಳಿರುವೆಡೆಗಳಲ್ಲಿಯೂ ಅಪರಾಧ ಕೃತ್ಯಗಳ ಕಡತಗಳಲ್ಲಿ ವಿಶೇಷ ಅಪರಾಧಗಳು ಕಂಡು ಬರುವುದಿಲ್ಲ. ಈ ನಿರಾಕರಿಸಲಾಗದ ಸತ್ಯ, ಪ್ರವಾದಿವರ್ಯರ(ಸ) ನಿಧನದ 1400 ವರ್ಷಗಳ ಬಳಿಕವೂ ದೇವ ಕಾನೂನುಗಳಿಗೆ ಬದ್ಧವಾಗಿ ಬಾಳುವ ಜನ ಸಮುದಾಯ(ಉಮ್ಮತ್)ವನ್ನು ಕಟ್ಟಿ ಬೆಳೆಸಿದ ಮಹಾತ್ಮರೆಂದು ಡಂಗುರ ಸಾರುವುದಿಲ್ಲವೇ! ಪುನರಪಿ ಜ್ಞಾಪಿಸಿರಿ. 'ಲಾ ಇಲಾಹ' ಎಂಬ ವಚನವು ಎಲ್ಲಾ ಭಯ ಭೀತಿಯನ್ನೂ ನಿವಾರಿಸುತ್ತದೆ. 'ಇಲ್ಲಲ್ಲಾಹ್' ಎಂಬ ವಚನವು ದೇವಭಯವನ್ನು ಹುಟ್ಟಿಸುತ್ತದೆ. 'ಮುಹಮ್ಮದುರ್ರಸೂಲುಲ್ಲಾಹ್' ಐಹಿಕ ಜಗತ್ತಿನಲ್ಲಿ ಹೇಗೆ ಬದುಕಬೇಕೆಂದು ಕಲಿಸುತ್ತದೆ.

-----

# ಮಾನವ ಕಾನೂನು ಮತ್ತು ದೇವ ಕಾನೂನು

ಮಾನವ ಕಾನೂನುಗಳಲ್ಲಿ ಎರಡು ಅಂಶಗಳಿವೆ. ಒಂದು, ದೇವ ಕಾನೂನಿನಿಂದ ಎರವಲು ಪಡೆದದ್ದು. ಎರಡು, ಮಾನವನು ಸ್ವಯಂ ನಿರ್ಮಿಸಿದ್ದು. ಕೊಲೆ, ದರೋಡೆ, ಕಳ್ಳತನಗಳು ಅಪರಾಧವೆಂದು 20ನೇ ಶತಮಾನದಲ್ಲಿ ಅಥವಾ ಪಿನಲ್ ಕೋಡ್ ನಿರ್ಮಾಣಗೊಂಡ ಹದಿನೆಂಟನೆಯ ಶತಮಾನದಲ್ಲಿ ಮಾತ್ರ ಘೋಷಿತವಾದುದಲ್ಲ. ಅವು ಅಪರಾಧ ಮತ್ತು ಶಿಕ್ಷಾರ್ಹವೆಂದು ಸನಾತನ ದೇವ ಕಾನೂನುಗಳಲ್ಲಿಯೇ ಸಾರಲಾಗಿತ್ತು. ಅನಂತರ ಅವುಗಳನ್ನು ಮಾನವ ಕಾನೂನುಗಳಲ್ಲಿ ಅಳವಡಿಸಲಾಯಿತು. ಪಿನಲ್ ಕೋಡ್ ಜಾರಿಯಾಗುವುದಕ್ಕಿಂತ ಮುಂಚೆ ಅವು ಸಮ್ಮತಾರ್ಹವಾಗಿತ್ತೆಂದು ಯಾರೂ ಹೇಳಲಾರರು. ಶಿಕ್ಷೆಗಳಲ್ಲಿ ಭಿನ್ನತೆಯಿರಬಹುದಾದರೂ, ಅವು ಅಪರಾಧಗಳೆಂದು ಸದಾ ಪರಿಗಣಿಸಲ್ಪಟ್ಟಿವೆ. ಹಾಗೆಯೇ ಪಿನಲ್ ಕೋಡ್‌ನ ಕಾನೂನು ತಜ್ಞರು ನಾವು ದೇವ ಕಾನೂನು(ಧರ್ಮ ನಿಯಮ)ಗಳ ಆಧಾರದಲ್ಲಿಯೇ ಕಾನೂನು ರಚಿಸಿದೆವೆಂದು ಸ್ವಯಂ ಒಪ್ಪಿಕೊಂಡಿರುವುದಂತೂ ಬಹಿರಂಗ ಸತ್ಯ.

ಅದೇ ವೇಳೆ ಮಾನವ ಕಾನೂನುಗಳ ಇನ್ನೊಂದು ಪಾರ್ಶ್ವವನ್ನು ನೋಡಿರಿ. ಹಲವು ಅಪರಾಧಿಗಳು ಪಾರಾದರೂ ಓರ್ವ ನಿರಪರಾಧಿಗೆ ದಂಡನೆಯಾಗಬಾರದೆಂದು ಮಾನವಕೃತ ಕಾನೂನುಗಳು ಹೇಳುತ್ತವೆ. ಆದರೆ, ಪ್ರಸ್ತುತ ಕಾನೂನುಗಳಿಂದ ನಿರಪರಾಧಿಗಳೇ ಹೆಚ್ಚಾಗಿ ದಂಡನೆಗೆ ಗುರಿಯಾಗುತ್ತಿರುವರೆಂದು ಜಾಗತಿಕ ಇತಿಹಾಸ ಸಾರುತ್ತಿದೆ. ಇತಿಹಾಸ ಹಾಗಿರಲಿ, ಇಲ್ಲಿ ಈಗ ನಡೆಯುತ್ತಿರುವುದೇನು? ಓರ್ವ ಪೊಲೀಸ್ ಅಧಿಕಾರಿಯು ಯಾರೋ ಒಬ್ಬನು ಕೊಟ್ಟ ದೂರಿನನ್ವಯ ಅಥವಾ ತನ್ನ ಸ್ವಂತ ಇಚ್ಛೆಯಂತೆ ಯಾರನ್ನಾದರೂ ಬಂಧಿಸಿ 24 ಘಂಟೆಗಳ ಕಾಲ ಲಾಕಪ್ಪಿನಲ್ಲಿರಿಸಬಹುದು. ಅಂದರೆ ಈ ಮಾನವ ಕಾನೂನಿನಲ್ಲಿ ಓರ್ವ ನಿರಪರಾಧಿಯನ್ನು 24 ಘಂಟೆ ದಂಡಿಸುವ ಅವಕಾಶವಿದೆ. ಆ ಬಳಿಕ ಆರೋಪಿಯನ್ನು ನ್ಯಾಯಾಧೀಶರ ಮುಂದೆ ಹಾಜರುಪಡಿಸಲಾಗುತ್ತದೆ. ಈತನಿಗೆ ಜಾಮೀನು ನೀಡಬಾರದು. ಈತನನ್ನು 15 ದಿನ ರಿಮಾಂಡಿನಲ್ಲಿರಿಸಬೇಕೆಂದು ಪೊಲೀಸ್ ಇಲಾಖೆಯು ಸೂಕ್ತ ಮನವಿ ಸಲ್ಲಿಸಿದರೆ ನ್ಯಾಯಾಧೀಶರು ಆರೋಪಿಗೆ ರಿಮಾಂಡಿನ ಆಜ್ಞೆ ನೀಡುತ್ತಾರೆ. ಆರೋಪಿಯು ನಿರಪರಾಧಿಯಾಗಿದ್ದರೂ ಮಾನವ ಕಾನೂನಿಗೆ ಯಾವ ಚಿಂತೆಯೂ ಇಲ್ಲ. 24 ಗಂಟೆಗಳ ಲಾಕಪ್ ಮತ್ತು 15 ದಿನಗಳ ರಿಮಾಂಡ್ ದಂಡನೆಯಲ್ಲವೇ? ಈಗ ಭಾರತ ಹಾಗೂ ಇತರ ಕೆಲವು ರಾಷ್ಟ್ರಗಳಲ್ಲಿ ಇನ್ನೊಂದು ಕಾನೂನು ಜಾರಿಯಲ್ಲಿದೆ. ನ್ಯಾಯಾಧೀಶರೇ ಅಗತ್ಯವಿಲ್ಲ! ಉನ್ನತ ಪೊಲೀಸಧಿಕಾರಿ ನಿರ್ಧರಿಸಿದರಾಯಿತು. ಓರ್ವನನ್ನು ಆತ ನಿರಪರಾಧಿಯಾಗಿದ್ದರೂ ವಿಚಾರಣೆಯಿಲ್ಲದೇ ಒಂದು ವರ್ಷ ಜೈಲಿನಲ್ಲಿರಿಸಬಹುದು. ಹೀಗೆ ನಿರಪರಾಧಿಗೆ ಸರ್ವಥಾ ದಂಡನೆಯಾಗಬಾರದೆಂಬ ತತ್ವೋಪದೇಶವು ನಿರರ್ಥಕವಾಗುತ್ತದೆ.

ಅಪರಾಧ ನಡೆದಿದೆಯೇ? ಅದರಲ್ಲಿ ಕೆಡುಕಿನ ಉದ್ದೇಶವಿತ್ತೇ? ಎಂದು ಮಾನವ ಕಾನೂನು ತನಿಖೆ ನಡೆಸುತ್ತದೆ. ಶಿಕ್ಷೆ ವಿಧಿಸುತ್ತದೆ. ಆದರೆ ಅಪರಾಧ ಮನೋಭಾವದ ಬೀಜವನ್ನು ನಾಶಪಡಿಸುವ ಕಾರ್ಯವನ್ನು ಅದು ಮಾಡುವುದಿಲ್ಲ. ಆ ಕೆಲಸ ನಮ್ಮದಲ್ಲವೆಂದು ಅವು ಜಾರಿಕೊಳ್ಳುತ್ತದೆ. ವಿಷವೃಕ್ಷ ಬೆಳೆದರೆ ಅದನ್ನು ಕಡಿದು ಬಿಡುವುದು ಅಷ್ಟೆ. ಅಲ್ಲಿಗೆ ನಮ್ಮ ಕೆಲಸ ಮುಗಿಯಿತು! ವಿಷವೃಕ್ಷ ಮೊಳೆತು ಬೆಳೆಯುವ ಮೂಲ ಬೀಜದ ನಿರ್ಮೂಲನ ನಮ್ಮ ಕರ್ತವ್ಯವಲ್ಲವೆಂದು ಮಾನವ ಕಾನೂನು ಹೇಳುತ್ತದೆ.

## ದೇವ ಕಾನೂನಿನ ವೈಜ್ಞಾನಿಕತೆ

ಅಪರಾಧ ಮನೋಭಾವದ ವಿಷಬೀಜವನ್ನು ಪಾಪವೆಂದು ದೇವ ಕಾನೂನು ಹೆಸರಿಸಿದೆ. ಪಾಪ ಮತ್ತು ಅಪರಾಧಗಳು ವಿಭಿನ್ನ ವಿಷಯಗಳು. ಪಾಪವು ಬೀಜ, ಅಪರಾಧವು ಅದರ ಉತ್ಪನ್ನ. ಪಾಪ ಪ್ರಜ್ಞೆಯೆಂಬ ವಿಷಬೀಜವನ್ನು ದೇವ ಭಯವೆಂಬ ಯಂತ್ರದಿಂದ ಕೀಳುವ ಶಕ್ತಿ ದೇವ ಕಾನೂನಿಗಿದೆ. ಮಾನವ ಕಾನೂನುಗಳ ಭಯದಿಂದ ಜನರು ಅಪರಾಧಗಳಿಂದ ದೂರವಿರುವರೆಂದು ಯಾರೂ ಹೇಳಲಾರರು. ಚಿಕ್ಕಂದಿನಲ್ಲಿಯೂ ಶಾಲಾ ಪಾಠಗಳಲ್ಲಿಯೂ ಅಪರಾಧ ಮನೋಭಾವವು ಪಾಪವೆಂದು ಕಲಿಸುವುದರಿಂದಲೇ ಬಹು ಮಂದಿ ಅಪರಾಧ ಕೃತ್ಯಗಳಿಂದ ದೂರ ನಿಲ್ಲುತ್ತಾರೆ. ಜನರು ಕಾನೂನಿಗಿಂತ ದೇವನಿಗೆ ಹೆಚ್ಚಾಗಿ ಹೆದರುತ್ತಾರೆ. ಕಾನೂನಿನ ಬೆದರಿಕೆಯಿಂದ ಅಪರಾಧಗಳನ್ನು ತಡೆಯುವ ಪ್ರಯತ್ನವು ತಾತ್ಕಾಲಿಕ ಪರಿಣಾಮ ಬೀರುತ್ತದೆ. ಆದರೆ, ದೇವಭಯವು ಅಪರಾಧ ಪ್ರಜ್ಞೆಯ ಮೇಲೆ ಶಾಶ್ವತ ಪರಿಣಾಮ ಬೀರುತ್ತದೆ.

ಮಾನವನ ಕಣ್ಣು, ಮುಖ, ಬಾಯಿ, ಕಿವಿ, ನಾಲಗೆ, ಕೈಕಾಲು ಇತ್ಯಾದಿ ಅವಯವಗಳು ಅಪರಾಧ ಮಾಡುವುದೆಂಬ ಭಾವನೆ ತಪ್ಪು. ಮೆನ್ಸರಿಯಾ(Mensrea) ಎಂದು ಕರೆಯಲಾಗುವ ಅಪರಾಧ ಪ್ರಜ್ಞೆಯು ಕೇವಲ ಮಣ್ಣು ಮೂಳೆಗಳ ಕ್ರಿಯೆಯೆಂಬ ಭಾವನೆಯೂ ಸರಿಯಲ್ಲ. ಆಧುನಿಕ ಮನಃಶಾಸ್ತ್ರಜ್ಞರು ಹೇಳುವ ಸುಪ್ತಪ್ರಜ್ಞೆಯ ಕ್ರಿಯೆಯೆಂಬ ಊಹೆಯೂ ಅಸಂಬದ್ಧ. ಶೈಶವ, ಬಾಲ್ಯ ಮತ್ತು ಯೌವನ ಈ ಮೂರು ಪ್ರಾಯದವರನ್ನೂ ಗಮನಿಸಿರಿ. ಈ ಪ್ರಾಯಸ್ಥರು ಬಾಹ್ಯ ಪ್ರೇರಣೆಯಿಲ್ಲದೆ ಕೆಡುಕಿನೆಡೆಗೆ ವಾಲುತ್ತಾರೆ. ದುಷ್ಟ ಸಂಬಂಧ ಮತ್ತು ಸಹವಾಸವು ಮಾನವರನ್ನು ಕೆಡಿಸುವುದು ನಿಜ. ಆದರೆ ಉತ್ತಮ ವಾತಾವರಣದಲ್ಲಿ ಬೆಳೆಯುವವರೂ ಹಲವೊಮ್ಮೆ ಕೆಡುಕಿನತ್ತ ಸಾಗುತ್ತಾರೆ. ಮಾನವ ಮನಸ್ಸಿಗೆ ಸ್ವಭಾವತಃ ಕೆಡುಕಿನ ಆಕರ್ಷಣೆಯಿದೆಯೆಂದು ಇಸ್ಲಾಮ್ ಹೇಳುತ್ತದೆ. ಹಾಗಿದ್ದರೂ ಆತನ ಸ್ವಭಾವವು ಕೆಡುಕನ್ನು ಸದಾ ಮೆಚ್ಚುವಂತಿಲ್ಲ. ಕೆಡುಕು ಮಾಡುತ್ತಿರುವಾಗ, ಅದು ತಪ್ಪು, ಅದನ್ನು ವರ್ಜಿಸಬೇಕೆಂಬ ಕಳಕಳಿಯು ಆತನ ಮನದಲ್ಲಿರುತ್ತದೆ. ಘೋರ ಅಪರಾಧಗಳನ್ನು ಮಾಡಿದ ಮಂದಿಯೂ ಸ್ವಯಂ ಪರಿತಪಿಸುತ್ತಿದ್ದರೆಂದು ಇತಿಹಾಸದಲ್ಲಿ ನಾವು ಓದಿದ್ದೇವೆ. ಅದು ಇಂದಿಗೂ ನಿಜ.

ಹಾಗೆಯೇ ಕೆಡುಕನ್ನು ತೊರೆದು ಒಳಿತನ್ನು ಪಾಲಿಸಿ ಆತ್ಮಶಾಂತಿ ಪಡೆಯುವ ತೃತೀಯ ಸ್ವಭಾವವೂ ಮಾನವನಲ್ಲಿದೆ. ಮಾನವರ ಈ ಮೂರು ಸ್ವಭಾವಗಳನ್ನು ವಿಶ್ಲೇಷಿಸಿ, ಪಾಪ, ಅಪರಾಧ ಮತ್ತು ಕೆಡುಕುಗಳಿಂದ ಹೇಗೆ ದೂರವಿರಬಹುದೆಂದು ಇಸ್ಲಾಮ್ ಕಲಿಸುತ್ತದೆ. ದೇವ ಕಾನೂನುಗಳ ಪಾಲನೆಯೇ ಭ್ರಷ್ಟ ಮಾರ್ಗಗಳಿಂದ ದೂರ ಸರಿಯುವ ಏಕೈಕ ವಿಧಾನವೆಂದು

ಇಸ್ಲಾಮ್ ಒತ್ತಿ ಹೇಳುತ್ತದೆ. ಆದರೆ ಮಾನವ ಕಾನೂನುಗಳು ಈ ಕೆಲಸ ಅನಗತ್ಯವೆಂದು ಕೈ ತೊಳೆದುಕೊಳ್ಳುತ್ತದೆ.

ಶಿಕ್ಷೆಯನ್ನು ಮಾತ್ರ ನೀಡುವುದು, ಮಾನವ ಕಾನೂನಿನ ಇನ್ನೊಂದು ನ್ಯೂನತೆಯಾಗಿದೆ. ಒಳಿತು ಮಾಡುವವರನ್ನು ಅದು ಸನ್ಮಾನಿಸುವುದಿಲ್ಲ. ಆದರೆ ದೇವ ಕಾನೂನು, ಸತ್ಕರ್ಮ ಹಾಂಛೆಯನ್ನು 'ಪುಣ್ಯ'ವೆಂದು ಕರೆದಿದೆ. ಪುಣ್ಯಗಳಿಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸನ್ಮಾನವಿದೆಯೆಂದು ತಿಳಿಸಿ, ಅಪರಾಧ ಕೃತ್ಯ ಮತ್ತು ಪಾಪಗಳನ್ನು ವಿರೋಧಿಸುತ್ತದೆ. ಹೀಗೆ ಸ್ವಭಾವತಃ ಮಾನವರನ್ನು ಅಪರಾಧ ಕೃತ್ಯಗಳಿಂದ ತಡೆಯುವ ಶಕ್ತಿ ಮಾನವ ನಿರ್ಮಿತ ಪಿನಲ್ ಕೋಡ್‌ಗಳಿಗಿವೆಯೇ? ಅದೇಕೆ ಸಾಧ್ಯವಾಗಿಲ್ಲವೆಂದು ಕಾನೂನು ತಜ್ಞರೊಡನೆ ಕೇಳಿ ನೋಡಿರಿ. ಅದು ಧರ್ಮಾಚಾರ ಮತ್ತು ಸಮಾಜ ಸುಧಾರಕರ ಕೆಲಸವೆಂಬ ಉತ್ತರ ಸಿಗುತ್ತದೆ. ಅರ್ಥಾತ್, ದೇವ ಕಾನೂನಿನ ಹಿರಿಮೆ ಮತ್ತು ಮಾನವ ಕಾನೂನಿನ ಅಜ್ಞತೆಯನ್ನು ಅವರು ಸ್ವಯಂ ಒಪ್ಪುತ್ತಾರೆ.

ನಾವು ಈ ತನಕ ದೇವ ಕಾನೂನಿನ ಹಿರಿಮೆಯನ್ನು ನೋಡಿದೆವು. ಜಗತ್ತಿನಾದ್ಯಂತವಿರುವ ಎಲ್ಲ ಸಮುದಾಯಗಳಿಗೂ ಪ್ರವಾದಿಗಳು ಬಂದಿದ್ದಾರೆ. ಅವರು ದೇವ ಕಾನೂನುಗಳನ್ನು ತಂದರು. ಆದರೆ ಹಲವು ಸಮುದಾಯಗಳು ಆ ದೇವ ಕಾನೂನುಗಳನ್ನು ಏನು ಮಾಡಿದುವು? ಕೆಲವರು ದೇವ ಕಾನೂನುಗಳನ್ನು ಸಂದೂಕದಲ್ಲಿರಿಸಿ ನಾಡಿನಾದ್ಯಂತ ಹೊತ್ತು ನಡೆದರು. ಅದರ ಒಳಗಿರುವುದನ್ನು ತೆರೆದು ನೋಡಿ ಅವುಗಳ ಆದೇಶಗಳನ್ನು ಜೀವನದಲ್ಲಿ ಮೈಗೂಡಿಸುವುದನ್ನು ಮರೆತು ಬಿಟ್ಟರು ಮತ್ತು ದೇವ ಕಾನೂನುಗಳನ್ನು ಬಿಟ್ಟು ಇತರ ಕಾನೂನುಗಳನ್ನು ಅಳವಡಿಸಿದರು. ಮತ್ತೆ ಕೆಲವರು, ಮಾನವರನ್ನು ಹುಟ್ಟಿನ ಆಧಾರದಲ್ಲಿ ವಿಂಗಡಿಸಿ, ಪ್ರತಿ ಜಾತಿಗೂ ವಿಭಿನ್ನ ಕಾನೂನುಗಳನ್ನು ನಿರ್ಮಿಸಿ, ಅವುಗಳಿಗೆ ದೇವ ಕಾನೂನಿನ ಬಣ್ಣ ಬಳಿದರು.

ಆದರೆ, ಮುಸ್ಲಿಮರು ತಮ್ಮ ಪ್ರವಾದಿಯು ತಂದ ದೇವ ಕಾನೂನನ್ನು ಮರೆಯಲಿಲ್ಲ. ನಮಗೆ ನಮ್ಮ ಧಾರ್ಮಿಕ ಕಾನೂನುಗಳೇ ಸಿಂಧುವೆಂದು ಅವರು ಪಟ್ಟು ಹಿಡಿಯುತ್ತಾರೆ. ಆ ರೀತಿ ಸ್ವಧರ್ಮದ ಕಾನೂನುಗಳಿಗಾಗಿ ಪಟ್ಟು ಹಿಡಿಯುವ ಬೇರೆ ಧರ್ಮೀಯರು ಈ ಲೋಕದಲ್ಲಿಲ್ಲವೆಂದೇ ಹೇಳಬಹುದು. ಏಕೆಂದರೆ, ನಮ್ಮ ಧಾರ್ಮಿಕ ಕಾನೂನುಗಳು ಪುರಾತನ ಮತ್ತು ಅವ್ಯಾವಹಾರಿಕವೆಂದು ಇತರ ಧರ್ಮೀಯರಿಗೆ ಚೆನ್ನಾಗಿ ತಿಳಿದಿದೆ. ಆದರೆ, ಮುಸ್ಲಿಮರು ತಮಗೆ ತಮ್ಮ ಧರ್ಮಸಂಹಿತೆಯೇ ಬೇಕೆಂದು ಪಟ್ಟು ಹಿಡಿಯುತ್ತಾರೆ, ಅದನ್ನೇ ಘೋಷಿಸುತ್ತಾರೆ, ಅದಕ್ಕಾಗಿ ಚಳವಳಿ ಹೂಡುತ್ತಾರೆ. ಇಸ್ಲಾಮಿನ ಪರಿಚಯವಾಗುವುದಕ್ಕಿಂತ ಮುಂಚೆ ಮುಸ್ಲಿಮರ ಈ ಧರ್ಮನಿಷ್ಠೆಯು ನನ್ನಂಥವರಿಗೆ ಸೋಜಿಗದ ವಿಷಯವಾಗಿತ್ತು. ಆದರೆ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಮುಸ್ಲಿಮರ ಬೇಡಿಕೆಯು ನ್ಯಾಯೋಚಿತವೆಂದು ಮನವರಿಕೆಯಾಯಿತು. ಅದೆಂತಹ ಅದ್ಭುತ ಕಾನೂನು! ನಾನು ಅವರಲ್ಲೋರ್ವನಾದರೆ ಅದರ ಮಾಧುರ್ಯವನ್ನು ಸವಿಯ ಬಹುದೆಂದು ಆಶಿಸಿದೆ. ಹೀಗೆ, ಇಸ್ಲಾಮ್ ಧರ್ಮವನ್ನು ಸೇರುವುದಕ್ಕಿಂತ ಮುಂಚೆಯೇ ಇಸ್ಲಾಮಿ ಕಾನೂನುಗಳಂತೆ ನಾನು ಬಾಳಲಾರಂಭಿಸಿದೆ.

----

# ನಿಷ್ಕಲ ಆರಾಧನೆ

ಇಸ್ಲಾಮ್ ಧರ್ಮವನ್ನು ಸ್ವೀಕರಿಸುವುದಕ್ಕಿಂತ ಮೊದಲೇ ನಾನು ಪವಿತ್ರ ವಚನ(ಕಲಿಮ)ವನ್ನು ಕಂಠಸ್ಥಗೊಳಿಸಿದೆ. ದೇಹ ಶುದ್ಧಿ ಮಾಡಿ, ಶುಚಿಯಾದ ಸ್ಥಳದಲ್ಲಿ ನಮಾಝ್ ಮಾಡತೊಡಗಿದೆ. ಅದು ಆಹ್ಲಾದಕರ ಅನುಭವವಾಗಿತ್ತು. ಆರಂಭದಲ್ಲಿ ನಾನು ದಿನದ ಐದು ಬಾರಿ ನಮಾಝ್ ಮಾಡುತ್ತಿರಲಿಲ್ಲ. ಮುಂಜಾನೆ ಮತ್ತು ಮುಸ್ಸಂಜೆ ಸ್ನಾನ ಮಾಡಿದ ಬಳಿಕ ನಮಾಝ್ ನಿರ್ವಹಿಸುತ್ತಿದ್ದೆ. ನಮಾಝ್ ಮುಗಿಸಿದಾಗ ಮನಸ್ಸು ಪ್ರಫುಲ್ಲವಾಗುತ್ತಿತ್ತು. ಹೃದಯದ ಅಳಲನ್ನು ದೇವನ ಮುಂದೆ ತೋಡಿಕೊಂಡು ಅದರಲ್ಲಿ ಆತನ ಅನುಗ್ರಹವನ್ನು ತುಂಬಿದಂತೆ ವರ್ಣನಾತೀತ ಆನಂದವಾಗುತ್ತಿತ್ತು. ನಮಾಝ್‌ನ ಭಂಗಿ ಮತ್ತು ಅದರಲ್ಲಿ ಪಾರಾಯಣ ಮಾಡುವ ಸೂರಃ (ಅಧ್ಯಾಯ) ಮತ್ತು ಆಯತ್(ವಾಕ್ಯ)ಗಳ ಅರ್ಥವರಿತಾಗ ನಮಾಝ್‌ನ ಗೌರವ ಹೆಚ್ಚುತ್ತದೆ.

ಪ್ರಾರ್ಥನೆ, ಪೂಜೆ, ಉಪಾಸನೆಗಳು ಇತರ ಧರ್ಮಗಳಲ್ಲಿಯೂ ಇವೆ. ಆದರೆ ನಮಾಝ್‌ಗಿಂತ ಮೊದಲು ಅಂಗಸ್ನಾನ ಮಾಡುವ ಇಸ್ಲಾಮಿನ ಪದ್ಧತಿಯು ನನ್ನನ್ನು ಅಚ್ಚರಿಗೊಳಿಸಿತು. ಎಲ್ಲ ನಮಾಝ್‌ನ ವೇಳೆಯೂ ಅಂಗಶುದ್ಧಿ ಮಾಡಬೇಕೆಂಬ ಕಲ್ಪನೆಯು ಅತ್ಯುತ್ಕೃಷ್ಟವಾಗಿದೆ. ಕೈ, ಬಾಯಿ, ಮೂಗು, ಕಿವಿ, ಕಾಲು ಇತ್ಯಾದಿ ಪದೇಪದೇ ಕೊಳೆಯಾಗುವ ಅಂಗಾಂಗಗಳನ್ನು ಪ್ರತಿ ನಮಾಝ್‌ನ ವೇಳೆಯೂ ತೊಳೆಯುವುದು ಆರೋಗ್ಯದಾಯಕವಲ್ಲವೇ? ನಾನು ಎಣಿಸಿ ನೋಡಿದಾಗ ಐದು ಹೊತ್ತಿನ ನಮಾಝ್‌ಗಾಗಿ ಪ್ರತಿದಿನ ಹದಿನೈದು ಬಾರಿ ಅಂಗಾಂಗಗಳನ್ನು ಸ್ವಚ್ಛಗೊಳಿಸಬೇಕಾಗುವುದು. ಅಷ್ಟು ಬಾರಿ ತೊಳೆಯುವ ಮುಖವು ಹೇಗೆ ಕಂಗೊಳಿಸಬಹುದು. ಕೇವಲ ತೊಳೆದ ಮಾತ್ರದಿಂದ ಮುಖವು ಪ್ರಸನ್ನವಾಗುವುದಿಲ್ಲ. ಶುದ್ಧ ಮಾಡಿದ ಬಳಿಕ ಮಧ್ಯವರ್ತಿಯ ಆಸರೆಯಿಲ್ಲದೆ ದೇವನ ಮುಂದೆ ನಿಂತು ನೇರವಾಗಿ ಆತನನ್ನು ಸಂಪರ್ಕಿಸು ವುದರಿಂದಲೇ ಮುಖ ಕಂಗೊಳಿಸುವುದೆಂದು ನನ್ನ ಭಾವನೆ. ನೀರಿನ ಕೊಳದ(ಹೌಳ್) ಸುತ್ತಲೂ ಕುಳಿತು ವಿಶ್ವಾಸಿಗಳ ಅಂಗಶುದ್ಧಿ ಮಾಡುವ ದೃಶ್ಯವು ಮನೋಹರವಾಗಿದೆ. ಅದರಲ್ಲಿ ಅತಿಸೂಕ್ಷ್ಮ ರಹಸ್ಯವು ಅಡಕವಾಗಿದೆ. ಕೆಲವು ಧರ್ಮಗಳಲ್ಲಿ ಮನೆಯಲ್ಲಿಯೇ ಶುದ್ಧರಾಗಿ ಮಂದಿರಗಳಿಗೆ ಹೋಗುವ ರೂಢಿಯಿದೆ. ಆ ಬಳಿಕ ದಾರಿಯಲ್ಲಿ ಏನಾದರೂ ಕೊಳೆಯಾದರೆ ಶುದ್ಧಿ ಮಾಡುವ ವ್ಯವಸ್ಥೆಯಿಲ್ಲ. ಇತರ ಕೆಲವು ಧರ್ಮಗಳಲ್ಲಿ ದೇವಾಲಯದ ಕೊಳಗಳಿರುತ್ತವೆ. ಆದರೆ, ಮುಸ್ಲಿಮರ ಮಸೀದಿಗಳಲ್ಲಿ ಅಂಗಶುದ್ಧಿ ಮಾಡಿ ಒಂದೆರಡು ಹೆಜ್ಜೆಯಿರಿಸಿದ ಕೂಡಲೇ ನಮಾಝ್‌ನ ಜಾಗ ತಲಪುತ್ತದೆ. ಇತರ ಧರ್ಮಗಳಲ್ಲಿ ಪ್ರಾರ್ಥನೆಗಿಂತ ಮುಂಚೆ ದಂತ ಮಜ್ಜನ, ಮೂಗು ಮತ್ತು ಕಿವಿಯ ಹೊರಮೈಯನ್ನು ಶುಚಿಗೊಳಿಸುವ ತ್ರಾಸವಿಲ್ಲ. ಆದರೆ ಇಸ್ಲಾಮ್ ಈ ವಿಷಯದಲ್ಲಿ ಕಟ್ಟುನಿಟ್ಟು ಪಾಲಿಸುತ್ತದೆ. ಹಾಗೆಯೇ ನಮಾಝ್‌ನಲ್ಲಿ ಮಾನವನ ಸ್ಥಾನವು ನನ್ನನ್ನು ಆಲೋಚನಾ ಮಗ್ನಗೊಳಿಸಿತು. ಬಡವ-ಬಲ್ಲಿದ, ರಾಜ-ಪ್ರಜೆ ಎಲ್ಲರೂ ದೇವನ ಮುಂದೆ ಸಮಾನರು. ಇವರು ದೇವನ ಮುಂದೆ ಹೇಗೆ ಸಮಾನರಾಗುತ್ತಾರೆ? ಮಾನವರೆಲ್ಲರೂ ಒಂದೇ.

ಆದಮ್ ಮತ್ತು ಹವ್ವಾರ ಮಕ್ಕಳು. ಆದಮ್‌ರನ್ನು ಮಣ್ಣಿನಿಂದ ಸೃಷ್ಟಿಸಲಾಗಿದೆ. ಆದ್ದರಿಂದ ಎಲ್ಲರೂ ಮಣ್ಣಿಗರು. ಮಣ್ಣಿನ ಕಣಗಳಲ್ಲಿ ಪರಸ್ಪರ ಉಚ್ಚ-ನೀಚತೆಗಳಿವೆಯೇ? ದೇವನ ಮುಂದೆ ನಿಲ್ಲುವವರ ಅಹಂಕಾರವನ್ನು ಮಣ್ಣುಗೂಡಿಸಿ, ಮಾನವನ ಅಲ್ಪತನ ಮತ್ತು ದೇವನ ಮಹಾನತೆಯನ್ನು ಇಸ್ಲಾಮಿನ ನಮಾಝ್ ಸಾರುತ್ತದೆ. ನಮಾಝ್‌ನಲ್ಲಿ ಶಿಸ್ತು-ನಿಯಮಗಳಿಂದ ಗುಲಾಮರಂತೆ ನಿಲ್ಲಬೇಕು. ಕತ್ತೆತ್ತಿ ಅತ್ತಿತ್ತ ನೋಡಬಾರದು. ಇಸ್ಲಾಮಿನ ಈ ವಿಧಿಯು ಮಾನವನನ್ನು ಅತ್ಯಂತ ವಿನಮ್ರಗೊಳಿಸುತ್ತದೆ.

ತಕ್ಬೀರ್(ಅಲ್ಲಾಹು ಅಕ್ಬರ್) ಹೇಳುತ್ತಾ ಎರಡೂ ಅಂಗೈಗಳನ್ನು ಕಿವಿ ತನಕ ಎತ್ತುವುದರ ಔಚಿತ್ಯವೇನು? ಪ್ರಭೂ! ಈ ವೇಳೆ ನಾನು ಸರ್ವಸ್ವವನ್ನೂ ತ್ಯಜಿಸಿದ್ದೇನೆ. ನಿನ್ನ ಮುಂದೆ ನನ್ನದೇನೂ ಇಲ್ಲ. ಕೇವಲ ನೀನು ಮಾತ್ರ. ಅಲ್ಲಾಹ್ ದೊಡ್ಡವನೆಂದು ವಿಶ್ವಾಸಿಯು ಘೋಷಿಸು ತ್ತಾನೆ. 'ಅಲ್ಲಾಹು ಅಕ್ಬರ್' ದೇವನೇ ದೊಡ್ಡವನೆಂದು ಕಿವಿಯ ಬಳಿ ಕೈಯಿರಿಸಿ ಹೇಳಿ ನೋಡಿರಿ. ನಾಲ್ದೆಸೆಗೆ ಹರಡುವ ಧ್ವನಿಯು, ಕೈಗಳನ್ನು ಕಿವಿಯ ಬಳಿಯಿರಿಸಿ 'ಅಲ್ಲಾಹು ಅಕ್ಬರ್' ಹೇಳಿದಾಗ ನೇರವಾಗಿ ಕಿವಿಯೊಳಗೆ ಇಳಿಯಿತು. ಅದು ನನ್ನ ನರನಾಡಿ, ಮಜ್ಜೆ, ಅಸ್ಥಿ, ಮನಮಸ್ತಿಷ್ಕ ಇತ್ಯಾದಿ ನನ್ನ ಅಹಂಭಾವದ ಅಂಗಗಳನ್ನು ಪಳಗಿಸುವ ಧ್ವನಿಯಾಯಿತು. ನನ್ನನ್ನು ಸಣ್ಣವನನ್ನಾಗಿ ಮಾಡಿತು. ತರುವಾಯ ತಲೆ ತಗ್ಗಿಸಿ ಓರ್ವ ದಾಸನಂತೆ ಕೈ ಕಟ್ಟಿ ನಿಲ್ಲುತ್ತೇನೆ. ಭಯಭಕ್ತಿಯು ಇತರ ಧರ್ಮಗಳಲ್ಲಿಯೂ ಇರಬಹುದು. ಆದರೆ ದೃಷ್ಟಿಯು ಎಲ್ಲೆಲ್ಲೋ ಸರಿಯುತ್ತದೆ. ವಿಗ್ರಹ, ಪುರೋಹಿತ, ಪಾದ್ರಿ, ಭಕ್ತಜನರ ಕ್ರಿಯೆಗಳು ಹೀಗೆ ದೃಷ್ಟಿಯು ಸದಾ ಚಂಚಲವಾಗುತ್ತದೆ. ಆದರೆ ಇಲ್ಲಿ ನಮಾಝ್‌ನ ನೇತೃತ್ವ ವಹಿಸುವವರ ಧ್ವನಿ ಮಾತ್ರ. ನೋಟ ಕೆಳಗಿರುತ್ತದೆ. ಕೊಂಚವೂ ಅತ್ತಿತ್ತ ನೋಡುವುದಿಲ್ಲ. ಪಿಸುಗುಟ್ಟುವುದಿಲ್ಲ. ಕುರ್‌ಆನ್ ವಾಕ್ಯಗಳನ್ನು ಓದಲಾಗುತ್ತದೆ. ಅದರಲ್ಲಿ ದೇವನನ್ನು ಪ್ರಕೀರ್ತಿಸುವುದರೊಂದಿಗೆ ಮಾನವನ ದೈನ್ಯತೆಯನ್ನು ವಿದಿತಪಡಿಸಲಾಗುತ್ತದೆ.

ಪವಿತ್ರ ಕುರ್‌ಆನಿನ 'ಅಲ್ ಫಾತಿಹ' ಅಧ್ಯಾಯವನ್ನು ಮೊದಲು ಓದಿದಾಗ ಅದು ನನ್ನಲ್ಲಿ ಹೇಗೆ ಪ್ರತಿಸ್ಪಂದಿಸಿತು? ಸರ್ವಸ್ತುತಿ ಸ್ತೋತ್ರವೂ ಕೇವಲ ದೇವನಿಗೆ... ಅದರಲ್ಲಿ ನಮಾಝ್ ಮಾಡುವವರ ಸ್ತುತಿಯಿಲ್ಲ; ಅವರು ಸ್ತುತ್ಯರ್ಹರಲ್ಲದಿರುವುದರಿಂದಲೇ ಪರಸ್ಪರ ಸಮಾನರು. ಆತನೇ ಸರ್ವಸ್ವವನ್ನೂ ಸೃಷ್ಟಿಸಿ ಪರಿಪಾಲಿಸಿ, ಪಾಕಗೊಳಿಸಿದ್ದಾನೆ. ಹಾಗಾದರೆ, ಮಾನವರು ಪ್ರಪಂಚದ ಧೂಳ ಕಣಗಳಂತೆ. ಧೂಳ ಕಣಗಳಲ್ಲಿ ತಾರತಮ್ಯ ತೋರುವುದು ಮೂಢತನವಲ್ಲವೇ!

"ಪರಮ ದಯಾಳುವೂ, ಕರುಣಾಮಯನೂ ಅಲ್ಲಾಹನೇ." ಆದ್ದರಿಂದ ಅತ್ಯಲ್ಪ ಕರುಣೆ ಮತ್ತು ದಯೆಯನ್ನು ಹೊಂದಿರುವ ಮಾನವರು ಆತನ ಮುಂದೆ ತೀರಾ ಸತ್ವಹೀನರು.

"ನಿರ್ಣಾಯಕ ದಿನದ ಅಧಿಪತಿಯೂ ಆತನೇ." ನಶ್ವರರಾದ ಈ ಮಾನವರು ಅನಶ್ವರನಾದ ದೇವನ ಮುಂದೆ ನಿಲ್ಲುವುದು ಹೇಗೆ? ಪ್ರಭೂ! ಕೇವಲ ನಿನ್ನನ್ನೇ ಆರಾಧಿಸುತ್ತೇವೆ. ಹೌದು! ನಿನ್ನನ್ನು ಮಾತ್ರ. ನಮಾಝಿನ ಸಹ ಪಂಕ್ತಿಯಲ್ಲಿ ನಮ್ಮೊಂದಿಗೆ ರಾಜಕುಮಾರರಿರ ಬಹುದು. ದರ್ಪ ತೋರುವ ಅಧಿಕಾರಿಯಿರಬಹುದು. ಆದರೆ ನಾನು ಕೇವಲ ನಿನಗೆ, ನಿನಗೆ ಮಾತ್ರ ಶರಣಾಗುತ್ತೇನೆ; ಮಾನವರಿಗೆ ವಂದಿಸುವುದಿಲ್ಲ. ಕೇವಲ ನಿನಗೆ ವಂದಿಸುತ್ತೇನೆ. ನಿನ್ನೊಡನೆ ಸಹಾಯ ಯಾಚಿಸುತ್ತೇನೆ, ನಿನ್ನೊಡನೆ ಮಾತ್ರ. ಮಾನವರ ನೆರವು ಸ್ಥಾಯಿಯಲ್ಲ. ಯಾರಾದರೂ ದೂರು ಹೇಳಿದರೆ ನೆರವು ಕಡಿಮೆಯಾಗುತ್ತದೆ. ಕೋಪ ಬಂದರೆ ಮಾನವರು ನಾನೇ ಮಹಾ

ಉದಾರಿಯೆಂದು ಜಗವಿಡೀ ಡಂಗುರ ಸಾರುತ್ತಾರೆ. ಭಾರೀ ಶ್ರೀಮಂತರೇ ಹಲವೊಮ್ಮೆ ದಿವಾಳಿಯಾಗಿ ಭಿಕ್ಷುಕರಾಗುತ್ತಾರೆ. ನೀನಾದರೋ ನನ್ನನ್ನು ಅಳೆದು, ನನ್ನ ಸೇವೆಯನ್ನು ತೂಗಿನೋಡಿ ಪ್ರತಿಫಲ ಕೊಡುವ ಉದಾರಿಯಾಗಿರುವೆ. ಆದುದರಿಂದಲೇ ನಾನು ನಿನ್ನೊಡನೆ ಮಾತ್ರ ಸಹಾಯ ಯಾಚಿಸುತ್ತೇನೆ.

"ನೀನು ನಮ್ಮನ್ನು ಸನ್ಮಾರ್ಗದಲ್ಲಿ ನಡೆಸು" ನಾವು ಸುಖಭೋಗದ ಎಲ್ಲ ಮಾರ್ಗಗಳನ್ನೂ ಹುಡುಕುವವರಾಗಿದ್ದೇವೆ. ಮಾರ್ಗ ಏನೇ ಆಗಿರಲಿ, ಕೇವಲ ಲಾಭದ ಬಗ್ಗೆಯೇ ಚಿಂತಿಸುವ ವಕ್ರ ಬುದ್ಧಿ ನಮ್ಮದು! ಆದ್ದರಿಂದ "ನೀನು ನಮ್ಮನ್ನು ಸನ್ಮಾರ್ಗದಲ್ಲಿ ನಡೆಸು, ನೀನು ಅನುಗ್ರಹಿಸಿದವರ ಮಾರ್ಗದಲ್ಲಿ" ಇತಿಹಾಸವು ನಮಗಿಂತ ಮುಂಚೆ ಅಜ್ಞಾತವೋ ಶೂನ್ಯವೋ ಆಗಿರಲಿಲ್ಲ. ಇತಿಹಾಸದ ಒಂದು ಸಂಪುಟವು ಮನೋಹರವಾದ ಪುಷ್ಪಹಾರವಾಗಿತ್ತು. ಆ ಮನೋಹರತೆಯಲ್ಲಿ ಕಂಗೊಳಿಸುವ ಪುಷ್ಪವಾಗಿ ನಮ್ಮನ್ನು ಸೇರಿಸು. "ಹೇ ದೇವಾ: (ಆ ಮಾರ್ಗವು) ನಿನ್ನ ಕೋಪಕ್ಕೆ ಪಾತ್ರರಾದವರದ್ದು. ಧನಿಯ ಕೋಪದ ನಿಮಿತ್ತ ಆಹಾರ, ಸಂಬಳ ಇತ್ಯಾದಿಗಳಲ್ಲಿ ಖೋತಾ ಆಗುತ್ತದೆ. ರಾಜನ ಕೋಪದಿಂದ ಸೆರೆಮನೆ ಮತ್ತು ಮರಣ ದಂಡನೆ. ಇವರೆಲ್ಲರ ಕೋಪವನ್ನು ಮೀರಿಸುವ ದೇವ ಕೋಪದ ಪರಿಣಾಮವನ್ನು ನಾವು ಇತಿಹಾಸದಲ್ಲಿ ಓದಿದ್ದೇವೆ. ನೆಲಸಮಗೊಂಡ ಸಮುದಾಯಗಳ ಇತಿಹಾಸ, ಭಗ್ನಾವಶೇಷಗಳ ಕೊಂಪೆ! ಹೆಣಗಳ ರಾಶಿ!"

ಫಾತಿಹಾದ ಈ ಕೊನೆಯ ಭಾಗವನ್ನು ಓದುವಾಗ ರೋಮಾಂಚನದಿಂದ ಮೈ ನಡುಗುತ್ತದೆ! ಈ ವಚನವನ್ನು ಓದಿ ಮುಗಿಸಿ, 'ಆಮೀನ್'(ನಮ್ಮ ಪ್ರಾರ್ಥನೆಯನ್ನು ಸ್ವೀಕರಿಸು) ಎಂದು ಹೇಳುವಾಗ ನನ್ನ ತುಟಿಗಳು ಕಂಪಿಸುತ್ತವೆ. ಕಂಠ ಗದ್ಗದಿತವಾಗುತ್ತದೆ. ಆ ಬಳಿಕ ಬಾಗುವಿಕೆ(ರುಕೂಅ್, ನಾನು ತಿಳಿದಿರುವ ಇತರ ಯಾವ ಧರ್ಮದಲ್ಲಿಯೂ ಈ ಭಂಗಿಯ ವಂದನೆಯಿಲ್ಲ. ಮೊಣಕಾಲ ಗಂಟುಗಳನ್ನು ಹಿಡಿದು ಬಾಗುವಾಗ ನನ್ನ ಮುಖದಲ್ಲಿ ರಕ್ತ ಚಲನೆಯಾಗುತ್ತದೆ. ಉಚ್ಛ್ವಾಸವು ಭಾರವಾಗುತ್ತದೆ. ಅದೇ ವೇಳೆ ನಾನು ಈಗ ಅರಬಿಯಲ್ಲಿ ಓದುತ್ತೇನೆ. ರಕ್ತ ಮತ್ತು ಶ್ವಾಸದ ಸಾಕ್ಷ್ಯದೊಂದಿಗೆ ಹಾಗೆ ಬಾಗಿ ಉಚ್ಚರಿಸುವ ಆ ವಾಕ್ಯದ ತಾತ್ಪರ್ಯವೇನು? "ನನ್ನ ಮಹಾನ್ ಪ್ರಭುವು ಪರಿಶುದ್ಧನು." ನಿಸ್ಸಂದೇಹವಾಗಿಯೂ ಶುದ್ಧ ದೇಹ, ಸ್ವಚ್ಛ ಉಡುಪು, ಶುಚಿಯಾಗಿರುವ ಮಸೀದಿ, ಶುಭ್ರರಾದವರ ಪಂಕ್ತಿ, ಅದರೊಂದಿಗೆ ನಿರ್ಮಲ ಹೃದಯದಿಂದ ರಕ್ತ ಚಲನೆ ಹಾಗೂ ಶ್ವಾಸೋಚ್ಛ್ವಾಸದ ಸಾನ್ನಿಧ್ಯದಲ್ಲಿ ಬಾಗಿ ನಾನು ನನ್ನ ಪ್ರಭುವನ್ನು ಪರಿಶುದ್ಧನೆಂದು ಪ್ರಕೀರ್ತಿಸುತ್ತೇನೆ. ಎಂತಹ ಸಂತುಲಿತ ಮಾತು! ಮೂರು ಬಾರಿ ಹೀಗೆ ಉಚ್ಚರಿಸಿ ರುಕೂಅ್‌ನಿಂದ ಮೇಲೇಳುವಾಗ ಹೇಳುವುದೇನು? "ದೇವನು ಆತನನ್ನು ಸ್ತುತಿಸುವವರ ಸ್ತುತಿಯನ್ನು ಆಲಿಸುವವನಾಗಿದ್ದಾನೆ." ಈ ಘೋಷಣೆಯು ನನ್ನ ಅಂತರಂಗದಲ್ಲಿ ವಿಶ್ವಾಸದ ಅಲೆಯೆಬ್ಬಿಸಿತು. ದೇವನು ನೋಡುತ್ತಾನೆಯೇ ಅಥವಾ ಆಲಿಸುತ್ತಾನೆಯೇ ಎಂದು ವಿವೇಚಿಸದೆ ನಡೆಸಲಾಗುವ ಪೂಜೆ ಪುರಸ್ಕಾರಗಳಿಂದ ಪ್ರಯೋಜನವೇನು? ದೇವನು ನನ್ನ ಪ್ರಾರ್ಥನೆಯನ್ನು ಸ್ವೀಕರಿಸುತ್ತಾನೆಂಬ ಪ್ರಜ್ಞೆಯು(ನಮಾಝ್‌ನಲ್ಲಿ) ದೃಢವಾಗುತ್ತದೆ. ರುಕೂಅ್‌ನಿಂದ ಏಳುವಾಗ ಎದೆ ಮತ್ತು ದೇಹ ಸೆಟೆಯುತ್ತದೆ. ಸೆಟೆದು ನಿಂತಾಗ ಪುನಃ ಅಹಂಕಾರ ತಲೆ ಹಾಕಬಹುದು. ಆದ್ದರಿಂದ ಆ ಕೂಡಲೇ ಹೀಗೆ ಉಚ್ಚರಿಸಲಾಗುತ್ತದೆ. "ನಮ್ಮ ಪ್ರಭುವೇ! ಕೇವಲ ನಿನಗೆ ಸರ್ವಸ್ತುತಿಯು." ನಿಜ, ಮಾನವನು ಪ್ರತಿಷ್ಠೆಯ ಮರೀಚಿಕೆಯ ಹಿಂದೆ

ಅಲೆದಾಡುತ್ತಾನೆ. ಅದು ಆತನನ್ನು ಅಜ್ಞಾನದ ಗಿರಿಶಿಖರದಿಂದ ಕೆಳಗುರುಳಿಸುತ್ತದೆ. ದೇವನಿಗೆ ಸವಾಲೊಡ್ಡಿದ ಧಿಕ್ಕಾರಿಗಳೆಲ್ಲರೂ ಪ್ರತಿಷ್ಠೆಯ ಗುಲಾಮರಾಗಿದ್ದರು. ಆದ್ದರಿಂದ ಸರ್ವಸ್ತುತಿಯನ್ನೂ ದೇವನಿಗರ್ಪಿಸಿ ಮಾನವನನ್ನು ತುಚ್ಛ ವಸ್ತುವನ್ನಾಗಿ ಮಾಡಲಾಗಿದೆ. ಪುನಃ ದೇವನೇ ದೊಡ್ಡವನೆಂದು ಹೇಳಿ ನನ್ನ ದೇಹವನ್ನು ಭೂಮಿಗೆ ಸರಿಸುತ್ತೇನೆ. ಹಣೆಯು ಭೂಮಿಯನ್ನು ಸ್ಪರ್ಶಿಸುವ ಶಿರೋವಂದನೆಯೆಂಬ ಆ ಸುಜೂದ್‌ನ ಭಂಗಿಗೆ ಹೋಗುವಾಗ ವಿಮಾನವು ಧರೆಗಿಳಿದಂತೆ ಭಾಸವಾಗುತ್ತದೆ.

ನನ್ನ ದೇಹವು ತುಂಬಾ ಭಾರವಾಗಿರುವುದರಿಂದ ಆರಂಭದಲ್ಲಿ ಸುಜೂದ್‌ನ ಭಂಗಿಯು ನನಗೆ ತುಂಬಾ ತ್ರಾಸವಾಗುತ್ತಲಿತ್ತು. ಸೆರೆಮನೆಯ ಹಿಂಸೆಗಳಿಂದಾಗಿ ಕುಳಿತುಕೊಳ್ಳುವಾಗ ಎಡಗಾಲಿನ ಅಸ್ಥಿಗಳಲ್ಲಿ ಲಟಿಕೆ ಮುರಿದಂತಾಗುತ್ತಿತ್ತು. ನೋವು ಸಹಿಸಿ ಮೆಲ್ಲನೆ ಮೊಣಕಾಲೂರಿ ಹಣೆ ನೆಲದಲ್ಲಿರಿಸಿ, ಎರಡೂ ಅಂಗೈಗಳನ್ನು ಕಿವಿಗಳ ಬಳಿಯಿರಿಸಿದಾಗ- ಎರಡು ಪಾದದ ತುದಿ, ಕಾಲ ಮೊಣಗಂಟು, ಅಂಗೈ, ಹಣೆ, ಮೂಗು ಎಂಬೀ ಎಂಟು ಅಂಗಾಂಗಗಳನ್ನು ನೆಲವು ಸ್ಪರ್ಶಿಸುತ್ತವೆ. ನೆಲದಲ್ಲಿ ಅಡ್ಡ ಬೀಳುವುದು, ಉರುಳುವುದು ಇತ್ಯಾದಿಗಳು ವಂದನೆಯ ಉನ್ನತ ಭಂಗಿಗಳಾಗಿರಬಹುದು. ಆದರೂ ಶ್ರಮ, ಗಮನ ಮತ್ತು ಸ್ವಪ್ರಜ್ಞೆಯನ್ನು ಮೂಡಿಸುವ ನಿಟ್ಟಿನಲ್ಲಿ ಇಸ್ಲಾಮಿನ ಸುಜೂದ್(ಸಾಷ್ಟಾಂಗ) ಭಂಗಿಯು ಅತ್ಯುತ್ಕೃಷ್ಟವೆಂದು ನಾನು ಮನಗಂಡಿದ್ದೇನೆ. ಹಣೆ ಮತ್ತು ನಾಸಿಕವು ನೆಲಕ್ಕೆ ತಾಗುವಾಗ ದೃಷ್ಟಿಯೂ ಅಲ್ಲಿಯೇ ಕೇಂದ್ರೀಕೃತವಾಗುತ್ತದೆ. ತುಟಿಗಳೂ ನೆಲದ ಸಮೀಪವಿರುತ್ತದೆ. ಹೃದಯವೂ ಬಾಗುತ್ತದೆ. ತಲೆ ನೆಲದಲ್ಲಿರಿಸಿ ಹೃದಯವನ್ನು ಬಾಗಿಸುವುದೇಕೆ? ಆ ಎರಡು ಅವಯವಗಳು ದೇವನು ಮಾನವನಿಗೆ ನೀಡಿರುವ ಮಹಾ ಅನುಗ್ರಹಗಳಾಗಿವೆ. ಆ ಎರಡು ಅಂಗಗಳ ನಿಮಿತ್ತವೇ ಮಾನವರಿಗೆ ಜಗತ್ತಿನಲ್ಲಿ ನಾಯಕತ್ವ(ಖಿಲಾಫತ್) ನೀಡಲಾಗಿದೆ. ಅನೇಕ ಖಗ, ಮೃಗ ಮತ್ತು ಜಲಚರಗಳು ಮಾನವರಿಗಿಂತ ಬಲಾಢ್ಯವಾದ ಅಂಗಾಂಗಗಳನ್ನು ಹೊಂದಿವೆ. ಮಾನವ ಶಿರದ ಬುದ್ಧಿಯೇ ಆತನ ಮೇಲ್ಮೆಯ ಕೇಂದ್ರ. ಅನೇಕ ಮೃಗಗಳೂ ಚುರುಕು ಬುದ್ಧಿಯನ್ನು ಪಡೆದಿದೆ. ಆದರೆ ಮಾನವ ಬುದ್ಧಿಯಂತೆ ಆಲೋಚಿಸುವ ಮತ್ತು ಚಿಂತನೆ ನಡೆಸುವ ಸಾಮರ್ಥ್ಯ ಇತರ ಜೀವಜಂತುಗಳಿಗಿಲ್ಲ. ಈ ವಿಶೇಷ ಬುದ್ಧಿಗಾಗಿಯೇ ದೇವನು ಮಾನವನಿಗೆ ಜಗತ್ತಿನ ನಾಯಕತ್ವವನ್ನು ನೀಡಿದ್ದಾನೆ. ಸುಜೂದ್‌ನಲ್ಲಿ ಶಿರಬಾಗುವ ಮೂಲಕ ಬುದ್ಧಿಯನ್ನು ಅವರ ಒಡೆಯನಿಗೆ ಅಧೀನಗೊಳಿಸಲಾಗುತ್ತದೆ. ಹೃದಯವು ಪ್ರಾಣ ರಕ್ಷಣೆಯ ಮಾಯಾ ಕವಚವಾಗಿದೆ. ಇಸ್ಲಾಮಿನ ಆರಾಧನಾ ಕ್ರಮವು ಆ ಹೃದಯವನ್ನು ದೇವನ ಮುಂದೆ ಬಾಗಿಸುತ್ತದೆ. ಶಿರ ಮತ್ತು ಅದಕ್ಕೆ ರಕ್ತ ಹರಿಸುವ ಹೃದಯಗಳು ದೇವ ಧಿಕ್ಕಾರದ ಸಮರ ಭೂಮಿಯಾಗಬಲ್ಲಂತಹ ಎರಡು ಅಂಗಗಳಾಗಿವೆ. ದೇವನನ್ನು ಧಿಕ್ಕರಿಸಿ ಬಾಳಿದವರ ಇತಿಹಾಸವನ್ನು ನೋಡಿದರೆ ಅವರು ತಿಳಿಗೇಡಿಗಳಾಗಿರಲಿಲ್ಲವೆಂದು ತಿಳಿಯುತ್ತದೆ. ಪವಿತ್ರ ಕುರ್‌ಆನ್ ಪ್ರಸ್ತಾಪಿಸಿರುವ 'ಶೈತಾನ್' ಅತಿ ಬುದ್ಧಿವಂತನಾಗಿದ್ದ. ಇತಿಹಾಸದಲ್ಲಿ ಕಂಡು ಬರುವ ಇರಾಕ್‌ನ ನಿರಂಕುಶಾಧಿಪತಿ ನಮ್ರೂದ್‌ನಂತಹ ದೇವ ಧಿಕ್ಕಾರಿಗಳೆಲ್ಲರೂ ಮಹಾ ಮೇಧಾವಿಗಳಾಗಿದ್ದರು. ಶೈಕ್ಷಣಿಕವಾಗಿಯೂ ವೈಜ್ಞಾನಿಕವಾಗಿಯೂ ಅವರು ಮಹಾ ಚಾಣಾಕ್ಷರಾಗಿದ್ದರು. ಅವರ ಮೇಧಾಶಕ್ತಿಯು ಸರ್ವಶಕ್ತನನ್ನೂ ಧಿಕ್ಕರಿಸುವಂತಹ ಉದ್ಧಟತನ ತೋರಿತು. ಸಮಕಾಲೀನರಲ್ಲಿಯೂ ಅಂತಹ

ಬುದ್ಧಿಯ ರಾಕ್ಷಸರಿದ್ದಾರೆ. ಆ ಮಂದಿಯಂತಹ ಶಿರ, ಬುದ್ಧಿ, ಹೃದಯ ವಿಶ್ವಾಸಿಗಳಿಗಿರಬಾರದೆಂಬ ಉದ್ದೇಶದಿಂದ ಶಿರವನ್ನು ನೆಲಕ್ಕೆ ಸ್ಪರ್ಶಿಸುವ ಈ ಆರಾಧನಾ ಕ್ರಮವನ್ನು ಇಸ್ಲಾಮ್ ನಿರ್ಣಯಿಸಿದೆಯೆಂದು ನನ್ನ ಭಾವನೆ. ಶಿರವು ದೇಹದ ಅಂಗೋಪಾಂಗಗಳನ್ನು ಸಕ್ರಿಯಗೊಳಿಸುವ ಕೇಂದ್ರ. ಆದ್ದರಿಂದ ಶಿರಸ್ಸಿನ ಈ ವಂದನೆಯನ್ನು ಸರ್ವಾಂಗ ವಂದನೆಯೆನ್ನಬಹುದು. ಸುಜೂದ್‌ನಲ್ಲಿ ನನಗೆ ವಿಶಿಷ್ಟ ಆತ್ಮಾನುಭವವಾಗುತ್ತದೆ. ನನ್ನಂತೆ ಎಲ್ಲರಿಗೂ ಅನುಭವವಾಗುವುದೋ ತಿಳಿಯದು. ಶಿರವೂ ಸೇರಿ ಎಂಟು ಅಂಗಗಳನ್ನು ನೆಲವು ಸ್ಪರ್ಶಿಸುತ್ತವೆ. ನಯನಗಳು ತೆರೆದಿರುತ್ತವೆ. ಇಡೀ ದೇಹ ವಂದನೆಯಲ್ಲಿ ತಲ್ಲೀನವಾಗಿರುತ್ತದೆ. ಆದರೆ, ಮನಸ್ಸು ನಾನು ನಮಾಝ್ ಮಾಡುವ ಸ್ಥಳದಿಂದ ಮೇಲೇರುತ್ತದೆ. ಗಗನಗಾಮಿಯಾಗಿ, ಅಖಿಲ ವಿಶ್ವವನ್ನೂ ದಾಟಿ ಮಂದ ಬೆಳಕಿನ ನಭೋಮಂಡಲದಲ್ಲಿ ಇಂಪಾದ ದೇವಸ್ತೋತ್ರವನ್ನು ಆಲಿಸುವಂತಹ ಆತ್ಮಾನುಭವ ಪ್ರತಿ ನಮಾಝ್‌ನಲ್ಲಿಯೂ ಆಗುತ್ತದೆ. ಆ ವೇಳೆ ಸರ್ವೋನ್ನತವಾದ ನನ್ನ ಪ್ರಭುವು ಪರಿಶುದ್ಧನೆಂದು ತುಟಿಗಳು ಜಪಿಸುತ್ತವೆ. 'ಅಲ್ಲಾಹು ಅಕ್ಬರ್' ಎಂಬ ಧ್ವನಿಯು ಆ ತನ್ಮಯತೆಯಿಂದ ನನ್ನನ್ನು ಎಚ್ಚರಗೊಳಿಸುತ್ತದೆ. ತರುವಾಯ ನೇರವಾಗಿ ಕುಳಿತುಕೊಳ್ಳುತ್ತೇನೆ. ಪುನಃ ಶಿರಬಾಗುವಿಕೆ; ಆಕಾಶಾರೋಹಣ! ಸುಖಾನುಭವ! ದೇವ ಮಹಾತ್ಮೆಯನ್ನು ಕೊಂಡಾಡುವ ಮಂತ್ರ.

ಆ ಬಳಿಕ ಕುಳಿತು ಅತ್ತಹಿಯ್ಯಾತ್ ಓದುವ ಭಂಗಿಯೂ ನಮಾಝ್‌ನಲ್ಲಿ ನನ್ನನ್ನು ರೋಮಾಂಚನಗೊಳಿಸುತ್ತದೆ. ವಿಶೇಷತಃ ಅಲ್ಲಾಹನ ಹೊರತು ಆರಾಧನೆಗೆ ಯಾರೂ ಅರ್ಹರಿಲ್ಲವೆನ್ನುತ್ತಾ ತೋರು ಬೆರಳ(ಸಾಕ್ಷ್ಯ ಬೆರಳು)ನ್ನು ಮೇಲೆತ್ತುವಾಗ! ಆಗ ಏನಾಗುವುದು? ಆ ಬೆರಳಿನಿಂದ ಮಿಂಚು ಹೊರಟಂತಾಗುತ್ತದೆ. ಅದರ ಪ್ರಕಾಶವು ಹೃದಯದಲ್ಲಿ ಪ್ರತಿಫಲನಗೊಂಡು ಮನಸ್ಸನ್ನು ಸಂಪೂರ್ಣವಾಗಿ ಆವರಿಸಿದಂತಹ ಅನುಭವ. ದೇಹವಿಡೀ ವಿದ್ಯುತ್ ಸಂಚಾರವಾಗಿ ಪ್ರಜ್ವಲಿಸುತ್ತಿರುವಂತೆ ಭಾಸವಾಗುತ್ತದೆ. ಪ್ರತಿಯೊಂದು ನಮಾಝ್ ಮತ್ತು ಪ್ರಾರ್ಥನೆ(ದುಆ)ಯಲ್ಲಿಯೂ ಸಾಮಾನ್ಯ ಜೀವನದಲ್ಲಿಯೂ 'ಲಾ ಇಲಾಹ ಇಲ್ಲಲ್ಲಾಹ್' ಎಂಬ ಪವಿತ್ರ ವಾಕ್ಯವನ್ನು ಆಲಿಸುವಾಗ ಈ ರೋಮಾಂಚನಕಾರಿ ಅನುಭವವಾಗುತ್ತದೆ. ಹಾಗೆಯೇ ನಮಾಝ್‌ನಲ್ಲಿ ಪ್ರವಾದಿ ಮುಹಮ್ಮದ್‌ರ(ಸ) ನಾಮ ಉಚ್ಚರಿಸುವಾಗಲೂ ಮಹದಾನಂದವಾಗುತ್ತದೆ.

ಎಲ್ಲ ಕ್ರಿಯೆಗಳನ್ನೂ ಮುಗಿಸಿ 'ಅಸ್ಸಲಾಮು ಅಲೈಕುಮ್'(ನಿಮ್ಮ ಮೇಲೆ ಶಾಂತಿಯಿರಲಿ) ಎಂದು ಹೇಳಿ ನಮಾಝ್‌ನಿಂದ ವಿರಮಿಸಿದಾಗ ಈ ಲೋಕಕ್ಕೆ ಮರಳಿ ಬಂದಂತಾಗುತ್ತದೆ. ಈ ಅದ್ಭುತ ಆತ್ಮಾನಂದದ ದಿನಗಳು ಮುಸ್ಲಿಮೇತರ ಬಾಂಧವರಿಗೂ ಎಂದು ಬಂದೀತು? ಈ ಚಿಂತೆ ನನ್ನನ್ನು ಸದಾ ಕಾಡುತ್ತಿದೆ. ನಮಾಝ್‌ನ ಸುಖಾನುಭವವನ್ನು ಸವಿಯ ತೊಡಗಿದ ದಿನದಿಂದ ನಾನು ಪರಿಚಯಸ್ಥರಿಗೆಲ್ಲ ಹೀಗೆ ಹೇಳುತ್ತಿದ್ದೇನೆ "ಮಿತ್ರಾ... ಇದು ಮಂದ ಮಾರುತ... ಸವಿಯ ಬಾ, ಇದು ಜೇನ ಹನಿ... ಹೀರು ಬಾ..."

----

# ಅರಬಿ ಭಾಷೆ ಮತ್ತು ನಮಾಝ್

ಪ್ರಾರಂಭದಲ್ಲಿ ನಮಾಝ್‌ನ ಅರಬಿ ಉಚ್ಚಾರವು ಬಹಳ ಕಷ್ಟವೆನಿಸುತ್ತಿತ್ತು. ಪವಿತ್ರ ಕುರ್‌ಆನಿನ ಒಂದು ವಾಕ್ಯವಾದರೂ ನನಗೆ ಪಠಿಸಲಾಗುತ್ತಿರಲಿಲ್ಲ. ತಮಿಳು ಮತ್ತು ಇಂಗ್ಲಿಷ್ ಲಿಪಿಯಲ್ಲಿ ಬರೆದ ಒಂದೆರಡು ವಾಕ್ಯಗಳನ್ನು ಮಾತ್ರ ಅರಿತಿದ್ದೆ.

ನಮಾಝ್‌ನಲ್ಲಿ ಕುರ್‌ಆನನ್ನು ಅರಬಿ ಭಾಷೆಯಲ್ಲಿಯೇ ಯಾಕೆ ಪಾರಾಯಣ ಮಾಡಬೇಕು? ಮಾತೃ ಭಾಷೆಯಲ್ಲಿ ನಮಾಝ್ ನಿರ್ವಹಿಸಿದರಾಗದೇ? ಎಂದು ಪ್ರಶ್ನಿಸುವವರಿರಬಹುದು. ಸವಿವರವಾಗಿ ತಿಳಿಸಿದರೆ ಅದರ ವಾಸ್ತವಿಕತೆ ಅರ್ಥವಾಗಬಹುದೆಂದು ಭಾವಿಸುತ್ತೇನೆ. ಕುರ್‌ಆನ್ ಅರಬಿ ಭಾಷೆಯಲ್ಲಿ ಅವತೀರ್ಣಗೊಂಡಿದೆ ನಿಜ. ಆದರೆ ಆ ದೇವ ಗ್ರಂಥದ ಭಾಷೆಯು ಅರಬಿ ಭಾಷೆಗೂ ನಿಲುಕುವಂತಹದ್ದಲ್ಲ. ಪವಿತ್ರ ಕುರ್‌ಆನ್ ಆ ಕಾಲದ ಅರಬಿ ಪಂಡಿತರಿಗೆ ಹೀಗೆ ಸವಾಲೊಡ್ಡಿತು: "ನಿಮಗೆ ಸಾಮರ್ಥ್ಯವಿದ್ದರೆ ತತ್ಸಮಾನ ವಾಕ್ಯವನ್ನು ರಚಿಸಿ ತನ್ನಿರಿ." ಅಂದಿನ ಅರಬಿ ಭಾಷಾ ತಜ್ಞರು ಪ್ರಯತ್ನಿಸಿ ನೋಡಿದರು. ಆದರೆ ಅವರು ಸೋಲೊಪ್ಪಿದರೆಂದು ಇತಿಹಾಸವು ಹೇಳುತ್ತದೆ. ಇದರಿಂದ ತಿಳಿಯುವುದೇನು? ಪವಿತ್ರ ಕುರ್‌ಆನ್ ಅರಬಿಯಲ್ಲಿದ್ದರೂ ಅದರ ಭಾಷೆ ದೇವ ಭಾಷೆ. ಅಲ್ಲಾಹನ ಭಾಷೆ. ಅರಬಿಯು ಅನೇಕ ರಾಷ್ಟ್ರಗಳಲ್ಲಿ ಮಾತೃ ಭಾಷೆಯಾಗಿದೆ. ಆದರೆ ಪ್ರತಿಯೊಂದು ರಾಷ್ಟ್ರದಲ್ಲಿಯೂ ಅದರ ಶೈಲಿ ಭಿನ್ನವಾಗಿದೆ. ಅದೇ ವೇಳೆ ಪವಿತ್ರ ಕುರ್‌ಆನ್ ಎಲ್ಲ ರಾಷ್ಟ್ರಗಳಲ್ಲಿಯೂ ಏಕೈಕ ಶೈಲಿಯಲ್ಲಿದೆ. ಪಾರಾಯಣದಲ್ಲಿಯೂ ಏಕತಾನತೆ ಇದೆ. ಗಲ್ಫ್ ರಾಷ್ಟ್ರಗಳಲ್ಲಿ ಉದ್ಯೋಗಾರ್ಥ ಕೆಲವರು ಅರಬಿ ಕಲಿಯುತ್ತಾರೆ. ಅವರೊಡನೆ ಪವಿತ್ರ ಕುರ್‌ಆನಿನ ಯಾವುದಾದರೊಂದು ವಾಕ್ಯದ ಅರ್ಥ ಕೇಳಿ ನೋಡಿರಿ. ಅವರು ಮೂಕರಂತೆ ಕೈ ಅಲ್ಲಾಡಿಸುತ್ತಾರೆ. ಪವಿತ್ರ ಕುರ್‌ಆನನ್ನು ದೇವನು ದೇವ ಭಾಷೆಯಲ್ಲಿ ಇಳಿಸಿದ್ದಾನೆ. ಅದು ಸಕಲ ಮಾನವರ ಸೊತ್ತು. ಅದು ಯಾರಿಗೂ ಅನ್ಯವಲ್ಲ.

## ವೇದ ಭಾಷಾಧ್ಯಯನ

ಪವಿತ್ರ ಕುರ್‌ಆನನ್ನು ಮಾತೃ ಭಾಷೆಗಳಿಗೆ ಅನುವಾದಿಸಿ ಆ ತರ್ಜುಮೆಯನ್ನು ನಮಾಝ್‌ನಲ್ಲಿ ಓದಿದರೆ ಸಾಲದೇ? ಕ್ರೈಸ್ತ ಮತ್ತಿತರ ಧರ್ಮೀಯರು ಮಾಡುವಂತೆ ಮುಸ್ಲಿಮರೂ ಆ ಸಂಪ್ರದಾಯ ಪಾಲಿಸಬಹುದಲ್ಲವೇ ಎಂದು ಕೆಲವರು ಪ್ರಶ್ನಿಸಬಹುದು. ಅದರ ಉತ್ತರ ಹೀಗಿದೆ: ಪವಿತ್ರ ಕುರ್‌ಆನನ್ನು ಅಕ್ಷರಶಃ ಅದೇ ರೀತಿಯಲ್ಲಿ ಭಾಷಾಂತರಿಸಲು ಸಾಧ್ಯವಿಲ್ಲ. ಕುರ್‌ಆನ್ ದೇವ ಭಾಷೆಯಾಗಿರುವುದೇ ಅದಕ್ಕೆ ಕಾರಣ. ಅದರ ನೀತಿಯನ್ನು ವಿವರಿಸಬಹುದು. ವಿವರಣೆ ನೀಡಬಹುದು. ವ್ಯಾಖ್ಯಾನಿಸಬಹುದು. ಆದರೆ ನಿಖರ ಭಾಷಾಂತರ

ಅಸಾಧ್ಯ. ಪವಿತ್ರ ಕುರ್‌ಆನನ್ನು ಭಾಷಾಂತರಿಸಿದ ವಿದ್ವಾಂಸರೂ ತಮ್ಮ ತರ್ಜುಮೆಗಳನ್ನು ಕುರ್‌ಆನ್ ಎನ್ನುವುದಿಲ್ಲ. ಕವಿಗಳು ಸಾಮಾನ್ಯವಾಗಿ ಹೇಳುವುದನ್ನು ನೀವು ಕೇಳಿರಬಹುದು. ಕವಿತೆಯನ್ನು ಮೂಲ ಭಾಷೆಯಲ್ಲಿ ಓದಿದರೆ ಮಾತ್ರ ಅದರ ಸೊಬಗು ಮತ್ತು ಗಾಂಭೀರ್ಯ ಅರ್ಥವಾಗುತ್ತದೆ. ಇದು ಸಾಮಾನ್ಯ ಕವಿತೆಗಳ ವಿಚಾರ. ಕೇವಲ ಒಂದು ಶತಮಾನವಾದರೂ ಉಳಿಯದ ಕವಿತೆಗಳ ರಸಾಸ್ವಾದನೆಗಾಗಿ ಅವುಗಳ ಮೂಲಭಾಷೆ ಕಲಿಯಬೇಕು. ಹಾಗಿದ್ದರೆ 1400 ವರ್ಷಗಳಿಂದ ಉಳಿದುಕೊಂಡಿರುವ ಲೋಕಾಂತ್ಯದ ವರೆಗೂ, ಆ ಬಳಿಕವೂ ಉಳಿಯಲಿರುವ ದೇವ ಭಾಷೆಯ ಬಗ್ಗೆ ಏನು ಹೇಳೋಣ! ದೇವ ಭಾಷೆಯ ಸಂವೇದನೆ ಮತ್ತು ಭಾಷೆ ಎಷ್ಟಿದೆಯೆಂದರಿಯಬೇಕೇ? ದೇವ ಭಾಷೆಯಲ್ಲಿ ಪವಿತ್ರ ಕುರ್‌ಆನ್ ಅವತೀರ್ಣಗೊಂಡಾಗ ಅದರ ಭಾರ ತಾಳಲಾಗದೆ, ಧೀರರಾಗಿದ್ದ ಪ್ರವಾದಿವರ್ಯರ(ಸ) ದೇಹವಿಡೀ ಬೆವೆತು ಮುಖಕಮಲದಲ್ಲಿ ನೀರಹನಿ ಜಿನುಗುತ್ತಿತ್ತು. ಒಮ್ಮೆ ಪ್ರವಾದಿವರ್ಯರು(ಸ) ಒಂಟೆಯ ಮೇಲೆ ಕುಳಿತಿದ್ದಾಗ ದೇವನ ಭಾಷೆ ಅವತೀರ್ಣಗೊಂಡಿತು. ಅದರ ಭಾರ ಹೊರಲಾಗದೆ ಒಂಟೆ ನೆಲ ಕಚ್ಚಿತೆಂದು ಇತಿಹಾಸದಲ್ಲಿ ಓದಿದ್ದೇವೆ. ಈ ಘಟನೆಯ ಮರ್ಮವನ್ನು ಅರಿತವರು ಅರಬಿ ಭಾಷೆಯನ್ನು ಕಲಿಯಲು ಉತ್ಸುಕರಾಗಿರಬಹುದು. ಆ ಉತ್ಸಾಹ ನನ್ನಲ್ಲಿಯೂ ಇದೆ. ಒಂದು ಭಾಷೆಯನ್ನು ಕಲಿಯುವಾಗ ಅದರ ಲಿಪಿ, ಬರವಣಿಗೆ ಮತ್ತು ಉಚ್ಚಾರಣೆಯು ತುಂಬಾ ಕಷ್ಟವಾಗುತ್ತದೆ. ನನಗೂ ಅಂತಹ ಅನುಭವವಾಯಿತು. ಅರಬಿ ಉಚ್ಚಾರವು ನನ್ನ ನಾಲಗೆಗೆ ಮಣಿಯುತ್ತಿರಲಿಲ್ಲ. ಬಲಬದಿಯಿಂದ ಎಡಕ್ಕೆ ಬರೆಯುವುದೂ ದುಸ್ತರವಾಗಿತ್ತು. ಆದರೆ ಇದು ದೇವಭಾಷೆ. ಇದನ್ನು ಕಲಿಯಬೇಕೆಂಬ ದೃಢ ನಿರ್ಧಾರದಿಂದ ಅರಬೀ ಭಾಷೆಯು, ಸಾವಧಾನವಾಗಿ ಮುದ್ದಿನ ಗಿಳಿಯಾಗಿ ಭುಜದ ಮೇಲೇರಿ ಕುಳಿತಿತು. 6000 ಮೈಲುಗಳಾಚೆಯಿಂದ ಬಂದು ಆಡಳಿತ ನಡೆಸಿದ ಪರಕೀಯರ ಭಾಷೆಯನ್ನು ಅನೇಕ ಮಂದಿ ಕೈ ಮುಗಿದು ಕಲಿತುಕೊಂಡರು. ಕೈತುಂಬಾ ಸಂಬಳ ದೊರೆಯುವುದೆಂದರಿತ ಕೂಡಲೇ ಕೆಲವರು ದಡಬಡನೆ ಪರಭಾಷೆ ಕಲಿತರು. ಪ್ರವಾಸಾನುಕೂಲತೆಗಾಗಿ ಕೆಲವರು ಮೂವತ್ತು ದಿನಗಳಲ್ಲಿ ಒಂದು ಭಾಷೆಯನ್ನು ಖರೀದಿಸಿ ಓದುತ್ತಾರೆ. ಹೀಗಿರುತ್ತಾ, ಆಧ್ಯಾತ್ಮಿಕ ಜೀವನವನ್ನು ಸಮೃದ್ಧಗೊಳಿಸುವ ದೇವಭಾಷೆ ಕಲಿಯಲು ಆಲಸ್ಯವೇ?

ಇಲ್ಲಿ ಇನ್ನೊಂದು ಗಮನಾರ್ಹ ಅಂಶವಿದೆ. ಈ ಆಧುನಿಕ ಜಗತ್ತಿನಲ್ಲಿ ಏಕಭಾಷೆಯಿಂದ ಯಾವ ನಾಗರಿಕ ಸಮುದಾಯವೂ ಸಂತೃಪ್ತವಾಗುವುದಿಲ್ಲ. ಹಳ್ಳಿಯಿಂದ ಬರುವ ಮಸಾಲೆಕಡ್ಲೆ ಮಾರುವ ಅಜ್ಜಿಯೂ 'ಕಡ್ಲೆಕ್ಲೋಸ್' ಎನ್ನುತ್ತಾಳೆ. ನಗರವಾಸಿಗಳ ಮಾತುಕತೆಯಲ್ಲಿ ಅರೆಬರೆ ಇಂಗ್ಲಿಷ್ ಮಿಶ್ರವಾಗಿರುತ್ತದೆ. ಹಾಗೆ ನೋಡಿದರೆ ಈ ಲೋಕದಲ್ಲಿ ಯಾರೂ ಏಕಭಾಷಾ ಸೂತ್ರವನ್ನು ಅವಲಂಬಿಸಿರುವುದಿಲ್ಲ. ಜೀವನದ ಆವಶ್ಯಕತೆಗೆ ತಕ್ಕಂತೆ ಎಲ್ಲರೂ ಇತರ ಭಾಷೆ ಕಲಿಯಬೇಕಾಗುತ್ತದೆ. ಆದರೆ ಭಾಷೆಯನ್ನು ಹೇರಿದರೆ ಮಾತ್ರ ಕೋಲಾಹಲವಾಗುತ್ತದೆ. ದೇವಭಾಷೆಯು ಹೇರಲ್ಪಟ್ಟಿಲ್ಲ. ಅದು ದೈವಿಕ ವರದಾನವಾಗಿದೆ. ಆತನು ಅದನ್ನು ಓರ್ವ ವ್ಯಕ್ತಿಗೆ, ಇಬ್ಬರಿಗೆ, ಒಂದು ಭಾಷೆಯವರಿಗೆ ಅಥವಾ ಒಂದು ರಾಷ್ಟ್ರಕ್ಕೆ ನೀಡಿಲ್ಲ. ಅದನ್ನು ಇಡೀ ಮಾನವಕುಲಕ್ಕೆ ನೀಡಲಾಗಿದೆ. "ದೇವನು ನಮಗೆ ದಯಪಾಲಿಸಿರುವ ಅನುಗ್ರಹವನ್ನು

ಎಸೆದು ಬಿಡುವುದು ನಿನಗೆ ಭೂಷಣವೇ" ಎಂದು ನನ್ನ ಮನಸ್ಸು ಪದೇ ಪದೇ ಪ್ರಶ್ನಿಸುತ್ತಿತ್ತು. ಕ್ರೈಸ್ತರು ಅಥವಾ ಇತರರಂತೆ ತರ್ಜುಮೆಗಳನ್ನು ವೇದವೆಂದು ಪರಿಗಣಿಸಬಹುದೇ? ಇದರ ಉತ್ತರ ನೇರವಾಗಿದೆ. ಆ ವೇದಗಳು ದೇವ ಪ್ರೇಷಿತ ಭಾಷೆಗಳಲ್ಲಿ- ಸಾಕ್ಷಾತ್ ರೂಪದಲ್ಲಿ ಅಸ್ತಿತ್ವದಲ್ಲಿಲ್ಲ. ಅವು ಪ್ರವಾದಿಗಳ ಆಖ್ಯಾಯಿಕೆ ಮತ್ತು ಉಪದೇಶಗಳಾಗಿವೆ. ಆದ್ದರಿಂದ ಕ್ರೈಸ್ತ ಸಂಪ್ರದಾಯ ಅವಲಂಬನೀಯವಲ್ಲ. ಪವಿತ್ರ ಕುರ್‌ಆನ್, ಕೆಲವಾರು ಮಂದಿ ಮಾತ್ರ ಓದಬೇಕಾದಂತಹ 'ಮರ್ಮ' ವೇದವಲ್ಲ; ಇದು ಕುರ್‌ಆನಿನ ಮತ್ತೊಂದು ವೈಶಿಷ್ಟ್ಯ. ಕೆಲವು ವಿಶಿಷ್ಟ ವರ್ಗಕ್ಕೆ ಸೀಮಿತಗೊಳಿಸಿ ಇತರರಿಗೆ ನಿಷೇಧಿಸಲ್ಪಟ್ಟಿರುವ ಗ್ರಂಥವೂ ಅಲ್ಲ. ಅದು ಸಕಲ ಮಾನವರ ಪಾರಾಯಣಕ್ಕಾಗಿ ಅವತೀರ್ಣಗೊಂಡಿದೆ. ಕುರ್‌ಆನ್ ಎಂದರೆ 'ಓದಲ್ಪಡುವ' ಎಂದರ್ಥ. ಈ ವಾಸ್ತವಿಕತೆಯನ್ನು ಅರಿತು ನಾನು ಅರಬಿ ಭಾಷೆ ಕಲಿಯತೊಡಗಿದಾಗ ಅದರ ಅಭ್ಯಾಸ ಕ್ರಮವು ನನಗೆ ನವೀನವಾಗಿ ಕಂಡಿತು. ದೇವನಾಮ 'ಬಿಸ್ಮಿಲ್ಲಾ'ವನ್ನು ಉಚ್ಚರಿಸಿ ನಾನು ಪಠಣ ಆರಂಭಿಸಿದೆ. ಅದಕ್ಕಿಂತ ಹೆಚ್ಚಾಗಿ ನನ್ನನ್ನು ಚಕಿತಗೊಳಿಸಿದ್ದು, "ಈ ಪ್ರಯತ್ನವನ್ನು ನನಗೆ ಸುಲಭಗೊಳಿಸಿಕೊಡು ಪ್ರಭೂ" ಎಂದು ಅಧ್ಯಾಪಕನು ಪ್ರಾರ್ಥಿಸುವಾಗ ವಿದ್ಯಾರ್ಥಿಯೂ ಪುನರುಚ್ಚರಿಸುವ ಆ ಕೋರಿಕೆ(ದುಆ). ಇತರ ಯಾವ ಧರ್ಮದಲ್ಲಿಯೂ ಇಂತಹ ಕೋರಿಕೆಯ ಪಾಠವಿರುವುದನ್ನು ನಾನು ಕಂಡಿಲ್ಲ.

ನಾವು ಸುಲಭಗೊಳಿಸೆಂದು ಪ್ರಾರ್ಥಿಸುತ್ತೇವೆ. ಈ ವೇದವನ್ನು "ನಾವು ಸುಲಭಗೊಳಿಸಿರುವೆವು" ಎಂಬ ವಾಕ್ಯವೂ ಕುರ್‌ಆನಿನಲ್ಲಿದೆ. ಹಾಗಾದರೆ ನಮ್ಮ ಪ್ರಾರ್ಥನೆಗೆ ದೇವನು ಪೂರ್ವಭಾವಿಯಾಗಿಯೇ ಉತ್ತರಿಸಿದ್ದನೆಂದಾಯಿತು. ನನ್ನ ಅಧ್ಯಾಪಕರ ಬೇಡಿಕೆಯನ್ನು ವಿದ್ಯಾರ್ಥಿಯಾಗಿರುವ ನಾನೂ ಪುನರುಚ್ಚರಿಸುವಾಗ, ಅದನ್ನು ಸರಳಗೊಳಿಸಬೇಕಾದುದು ಕೇವಲ ನನಗೆ ಮಾತ್ರವೋ ಅಥವಾ ಆ ಕೋರಿಕೆಯಲ್ಲಿ ಅಧ್ಯಾಪಕರೂ ಸೇರಿರುವರೋ? ಆ ವಿಚಾರ ಮೈನವಿರೇಳಿಸಿತು. ಕಲಿಯುವ ವಿದ್ಯಾರ್ಥಿಗೆ ಮಾತ್ರ ಪಠಣ ಕಷ್ಟವೋ? ಅಥವಾ ಅಧ್ಯಾಪಕರಿಗೂ ಅದು ಕಷ್ಟದಾಯಕವಾಗಿದೆಯೋ? 'ಸರಳಗೊಳಿಸು' ಎಂಬ ಪ್ರಾರ್ಥನೆಯನ್ನು ಅಧ್ಯಾಪಕರೂ ಹೃತ್ಪೂರ್ವಕವಾಗಿ ಹೇಳುತ್ತಾರೆ. ಆದ್ದರಿಂದಲೇ, ಅರಬಿ ಭಾಷೆಯನ್ನು ಎಲ್ಲ ವಿದ್ಯಾರ್ಥಿಗಳಿಗೂ ಸುಲಭದಲ್ಲಿ ಕಲಿಸಲಾಗುವುದೆಂದು ಹೇಳುತ್ತಾರೆ. ಅದೇ ವೇಳೆ ಇನ್ನೊಂದು ಪ್ರಮುಖ ವಿಚಾರವನ್ನು ತಿಳಿದಿರಬೇಕು. ಅರಬಿ ಭಾಷೆಯನ್ನು ಸಮಗ್ರವಾಗಿ ಕಲಿತು ಅರಬಿ ಪಂಡಿತನಾದ ಬಳಿಕವೇ ಇಸ್ಲಾಮ್ ಸ್ವೀಕರಿಸಬೇಕೆಂಬ ನಿಯಮವಿಲ್ಲ. ಆರಂಭದಲ್ಲಿ ಸಣ್ಣ ಸಣ್ಣ ವಾಕ್ಯಗಳನ್ನು ಓದಿದರಾಯಿತು. ಅಲ್ಲಾಹು ಅಕ್ಬರ್, ಲಾಇಲಾಹ ಇಲ್ಲಲ್ಲಾಹ್, ಮುಹಮ್ಮದುರ್ರಸೂಲುಲ್ಲಾಹ್ ಇತ್ಯಾದಿ. ಆ ಬಳಿಕ ಸೂರಃ ಫಾತಿಹ ಎಂಬ ಅಧ್ಯಾಯ. ಅನಂತರ ಇತರ ಚಿಕ್ಕ ಅಧ್ಯಾಯಗಳು. ಹೀಗೆ ನಾನು ಅರಬಿ ಅಧ್ಯಯನ ಆರಂಭಿಸಿದೆ. ಈಗ ಪವಿತ್ರ ಕುರ್‌ಆನನ್ನು ಸಾವಧಾನವಾಗಿ ಕುಂಟುತ್ತಾ ಓದುತ್ತಿದ್ದೇನೆ. ಅಲ್ಲಾಹನಿಗೆ ಸರ್ವಸ್ತುತಿ.

----

# ಮುಕ್ತಿಯೆಡೆಗೆ

ನಾನು ಮುಸ್ಲಿಮನಾಗುವುದಕ್ಕಿಂತ ಮುಂಚೆಯೇ ಇಸ್ಲಾಮೀ ಆಚಾರಗಳು ನನ್ನನ್ನು ಆಕರ್ಷಿಸಿದ್ದುವು. ಮೈಮೇಲೆ ಧಾರಾಳ ನೀರೆತ್ತಿ ಸುರಿಯುವುದು ಅಥವಾ ನೀರಿನಲ್ಲಿ ಮುಳುಗಿ ಏಳುವುದು ಇದು ನನ್ನ ಸ್ನಾನದ ವೈಖರಿಯಾಗಿತ್ತು. ಆದರೆ ಒಂದಾದರೂ ರೋಮಕೂಪ ನೆನೆಯದೆ ಉಳಿದರೆ ಸ್ನಾನ ಪರಿಪೂರ್ಣವಾಗುವುದಿಲ್ಲವೆಂಬ ಇಸ್ಲಾಮೀ ಶಿಕ್ಷಣವು ನನ್ನನ್ನು ಪುಳಕಿತಗೊಳಿಸಿತು. ನನ್ನ ಸ್ನಾನದ ಶೈಲಿ ಬದಲಾಯಿತು.

ನನ್ನ ವಸ್ತ್ರಧಾರಣೆಯಲ್ಲಿ ಆಡಂಬರವೇ ಪ್ರಧಾನವಾಗಿತ್ತು. ನಾನು ನಡೆಯುವಾಗ ನನ್ನ ಉಡುಪು ನೆಲ ಸಾರಿಸುತ್ತಿತ್ತು. ಅದು ಗಾಂಭೀರ್ಯದ ನಡೆಯೆಂದು ನಾನು ಭಾವಿಸಿದ್ದೆ. ಉಡುಪು ಧಾರಣೆಯಲ್ಲಿ ಸಭ್ಯತೆ ಮತ್ತು ಶುಭ್ರತೆಯನ್ನು ಗಮನಿಸಬೇಕು. ತೊಟ್ಟ ಬಟ್ಟೆಯು ನೆಲಸಾರಿಸಬಾರದೆಂಬ ಇಸ್ಲಾಮೀ ನಿಯಮದಂತೆ ಉಡುಪು ಧರಿಸತೊಡಗಿದಾಗ ನನ್ನ ಅಹಂಕಾರ ಮತ್ತು ಗರ್ವ ಸಂಪೂರ್ಣ ಇಳಿಯಿತು.

ಇಸ್ಲಾಮ್ ಧರ್ಮವು ವಿರೋಧಿಸುವ ಕೆಲವು ದುರ್ಗುಣಗಳು ನನ್ನಲ್ಲಿದ್ದುವು. ಮುಸ್ಲಿಮನಾಗುವುದಕ್ಕಿಂತ ಮೊದಲೇ ನಾನು ಸರದಿಯಂತೆ ಅವುಗಳನ್ನು ತ್ಯಜಿಸಲಾರಂಭಿಸಿದೆ. ಆ ದುರ್ಗುಣಗಳನ್ನು ಕೈಬಿಟ್ಟಾಗ, ನನ್ನ ದೇಹದಲ್ಲಿಯೇ ಅಪೂರ್ವ ಬದಲಾವಣೆಯುಂಟಾಯಿತು. ದುರ್ಗಂಧ, ಆಲಸ್ಯ, ಕೆಂಗಣ್ಣು, ಮಾತಿನ ಅಸಭ್ಯತೆ ಮಾಯವಾಯಿತು. ದೇಹ ಚೊಕ್ಕಟವಾಯಿತು. ಇಸ್ಲಾಮ್ ನನ್ನ ಉಸಿರನ್ನೂ ಸುಗಂಧಮಯಗೊಳಿಸಿದಂತಾಯಿತು. ನಡೆನುಡಿಗಳನ್ನೂ ಇಸ್ಲಾಮೀ ಶಿಕ್ಷಣ ಸುಧಾರಿಸಿತು. ಹಠಮಾರಿತನ, ಅಹಂಕಾರ, ಮುಂಗೋಪ ಇತ್ಯಾದಿ ಗುಣಗಳು ಭೂಷಣವೆಂದು ನಾನು ಭಾವಿಸಿದ್ದೆ. ಸಭ್ಯ ಮಾತು ಮತ್ತು ಸೌಮ್ಯ ವರ್ತನೆಯ ಇಸ್ಲಾಮೀ ಆದೇಶಗಳನ್ನು ಸ್ವಯಂ ಪ್ರಯೋಗಿಸಿದೆ. ಕ್ರಮೇಣ ಆತ್ಮಾವಲೋಕನ ನಡೆಸಿದಾಗ "ಮಾನವೀಯತೆ ಮತ್ತು ಚಿಂತನ ಮನೋಭಾವ" ಹೃದಯದಲ್ಲಿ ತುಂಬಿರುವುದನ್ನು ಕಂಡೆ. ಸಂಕ್ಷಿಪ್ತದಲ್ಲಿ ಬೆಳಗಾತ ಎಚ್ಚೆತ್ತಲ್ಲಿಂದ ನಿದ್ರಿಸುವ ವರೆಗಿನ ನನ್ನ ಪ್ರತಿಯೊಂದು ಕ್ರಿಯೆಯಲ್ಲಿಯೂ ಇಸ್ಲಾಮ್ ಮಾರ್ಪಾಟು ತಂದಿತು. ಇದು ನಾನು ಮುಸ್ಲಿಮನಾಗುವುದಕ್ಕಿಂತ ಮುಂಚೆ ಇಸ್ಲಾಮೀ ಸ್ವಭಾವ ಶೈಲಿಯನ್ನು ಪಾಲಿಸಿದ ನಿಮಿತ್ತ ಸಾಧಿಸಿದ ಸುಧಾರಣೆಗಳು. ಪರಿಶುದ್ಧ ಮಾರ್ಗವು ಪರಿಶುದ್ಧಗೊಳಿಸಿತು. ತರುವಾಯ ನಾನು ಇಸ್ಲಾಮೀ ಗ್ರಂಥಗಳನ್ನು ಬರೆಯಲಾರಂಭಿಸಿದೆ. ಇಷ್ಟೆಲ್ಲ ಬರೆಯುತ್ತಿರುವ ನೀನು ಸ್ವಯಂ ಯಾಕೆ ಮುಸ್ಲಿಮನಾಗಲಿಲ್ಲ ವೆಂಬ ಪ್ರಶ್ನೆ ನನ್ನನ್ನು ಕಾಡುತ್ತಿತ್ತು. ಉತ್ತರ ಮತ್ತು ದಕ್ಷಿಣ ಭಾರತ ಹಾಗೂ ವಿದೇಶಗಳಿಂದ ಬಂದ ಅಂತಹ ಪ್ರಶ್ನೆಗಳ ಶರಗಳು ಪಂಜರವಾಗಿ ನನ್ನನ್ನು ಮಸೀದಿಯತ್ತ ನಡೆಸಲಾರಂಭಿಸಿತು! ಪವಿತ್ರ

ವಾಕ್ಯ(ಕಲಿಮ)ವನ್ನು ಉಚ್ಚರಿಸುವ ಗಳಿಗೆಯೂ ರೋಮಾಂಚನವಾಗಿದೆ. 1987ರ ಜೂನ್ 6ರಂದು ಮದರಾಸಿನ ಮನ್ನಡಿ ಮಲ್‌ಮೂರ್ ಮಸೀದಿಯ ಪೇಶ್ ಇಮಾಮ್ ಇಲ್ಯಾಸ್ ಅವರು ನನಗೆ ಪವಿತ್ರ ವಚನವನ್ನು ಹೇಳಿಕೊಟ್ಟರು. ನಾನು ಅದನ್ನು ಹೃದಯಂಗಮವಾಗಿ ಉಚ್ಚರಿಸಿದೆ. ಅಬ್ದುಲ್ಲಾ ಎಂಬ ಹೆಸರಿಟ್ಟುಕೊಂಡೆ.

## ಪತ್ನಿಯ ಇಸ್ಲಾಮ್ ಸ್ವೀಕಾರ

ತಮಿಳ್ನಾಡು ಮತ್ತು ಹೊರನಾಡುಗಳಿಂದ ನನಗೆ ಬಂದ ಅಭಿನಂದನಾ ಪತ್ರಗಳು ರಾಶಿ ಬಿದ್ದುವು. ಆದರೆ ಮನಸ್ಸು ನನ್ನ ಪತ್ನಿಯ ಇಸ್ಲಾಮ್ ಧರ್ಮವನ್ನು ಸ್ವೀಕರಿಸದ ಬಗ್ಗೆ ಕೊರಗುತ್ತಿತ್ತು. ನನ್ನ ಪತ್ನಿಯು ಕ್ರೈಸ್ತ ಮತಾವಲಂಬಿಯಾಗಿದ್ದಳು. ನನ್ನ ಇಸ್ಲಾಮೀ ಸಂಬಂಧವನ್ನು ಆಕೆ ಚೆನ್ನಾಗಿ ಬಲ್ಲಳು. ಆದರೆ, "ಏಸು ದೇವ ಪುತ್ರನಲ್ಲ. ಕೇವಲ ದೇವ ಪ್ರವಾದಿ" ಎಂಬ ಇಸ್ಲಾಮೀ ಕಲ್ಪನೆಯನ್ನು ಆಕೆ ಒಪ್ಪಲು ಹಿಂಜರಿದಳು. ನಾನು ನನಗೆ ತಿಳಿದ ರೀತಿಯಲ್ಲಿ ಹಲವು ಬಾರಿ ವಿವರಿಸಿದೆ. ನೇರವಾಗಿ ಹೇಳುವುದಿದ್ದರೆ, ನನ್ನ ಪತ್ನಿಯ ಇಸ್ಲಾಮ್ ಸ್ವೀಕಾರಕ್ಕಾಗಿ ನಾನು ಪಟ್ಟ ಪಾಡು, ನೃತ್ಯ ಸಂಗೀತಕ್ಕೆ ತಾಳ ಜೋಡಿಸುವುದಕ್ಕಿಂತಲೂ ದುಸ್ತರವಾಗಿತ್ತು. ಮಹಿಳೆಯರ ಇಸ್ಲಾಮ್ ಸ್ವೀಕಾರವು ದೇವನ ಮಹಾನ್ ಅನುಗ್ರಹವೆಂದು ನಾನು ಭಾವಿಸುತ್ತೇನೆ. "ಅದಿರಲಿ, ನಿಮ್ಮ ಪತ್ನಿಯು ಯಾಕೆ ಇನ್ನೂ ಇಸ್ಲಾಮ್ ಸ್ವೀಕರಿಸಿಲ್ಲ"ವೆಂದು ಪ್ರಾಮಾಣಿಕನಾಗಿ ಪ್ರಶ್ನಿಸಿದ ಓರ್ವ ಮಿತ್ರರನ್ನು ನೇರವಾಗಿ ಮನೆಗೆ ಕರೆದೊಯ್ದೆ. ಅವರ ಪ್ರಶ್ನೆಗೆ ಉತ್ತರವಾಗಿ ನನ್ನ ಪತ್ನಿಯೇ ಕೆಲವು ಪ್ರಶ್ನೆಗಳನ್ನು ಕೇಳಿದಳು. ಆಗ ನಿರುತ್ತರನಾಗಿ ಎದ್ದು ಹೋದ ಮಿತ್ರ ಈ ತನಕ ಬಂದಿಲ್ಲ. ಹಲವೊಮ್ಮೆ ನಾನು ನಿರುತ್ತರನಾಗುತ್ತಿದ್ದ ಆಕೆಯ ಪ್ರಶ್ನೆಗಳಿಗೆ ಕ್ರಮೇಣ ಉತ್ತರ ಕಂಡು ಹಿಡಿದೆ. ನನಗೆ ಸಾಧ್ಯವಿರುವ ರೀತಿಯಲ್ಲಿ ಅದನ್ನು ಆಕೆಗೆ ತಿಳಿಸಿದೆ. ಹಾಗಿದ್ದರೂ, ಕ್ಷಿಪ್ರ ಫಲ ದೊರೆಯಲಿಲ್ಲ. ನಾನು ಹೇಳಿದೆ: "ಸರಿ, ನನ್ನ ನಮಾಝನ್ನು ಗಮನಿಸು" ಆಕೆ ನನ್ನ ನಮಾಝನ್ನು ಸೂಕ್ಷ್ಮವಾಗಿ ಅವಲೋಕಿಸತೊಡಗಿದಳು. ನಾನು ಅಂಗಸ್ನಾನ ಮಾಡಿ ಏಕಾಗ್ರಚಿತ್ತದಿಂದ ನಮಾಝ್‌ನಲ್ಲಿ ತಲ್ಲೀನನಾಗುವುದನ್ನು ಆಕೆ ಅನೇಕ ಬಾರಿ ಗಮನಿಸಿದ್ದಳು. "ಪ್ರಭೂ! ನನ್ನ ಮಡದಿಯನ್ನು ನಿನ್ನ ಮಾರ್ಗದಲ್ಲಿ ಸೇರಿಸು!" ಎಂದು ಎರಡೂ ಕೈಗಳನ್ನೆತ್ತಿ ಕಂಬನಿ ತುಂಬಿ ಕಳಕಳಿಯಿಂದ ಪ್ರಾರ್ಥಿಸುವುದನ್ನೂ ಆಕೆ ಕಂಡಿರಬಹುದು! ಒಮ್ಮೆ ಆಕೆಯು ಉದ್ವಿಗ್ನತೆಯಿಂದ, "ನೀವು ಬೇಕಿದ್ದರೆ ಓರ್ವ ಮುಸ್ಲಿಮ್ ಹೆಣ್ಣನ್ನು ಮದುವೆಯಾಗಿ, ನನ್ನನ್ನು ಬಿಟ್ಟುಬಿಡಿ" ಎಂದಿದ್ದಳು. ಮೂವತ್ತು ವರ್ಷಗಳಿಂದ ಬೆಳೆದು ಬಂದ ದಾಂಪತ್ಯ ಸಂಬಂಧವನ್ನು ನನ್ನಿಂದ ಕಡಿಯಲಸಾಧ್ಯವೆಂದು ಅಂಗಲಾಚಿದೆ. ನನ್ನ ಕಣ್ಣಾಲಿಗಳಲ್ಲಿ ನೀರು ತುಂಬಿರುವುದನ್ನು ಕಂಡು ತಾನು ಇಸ್ಲಾಮ್ ಸ್ವೀಕರಿಸುವೆನೆಂದು ಆಕೆ ಮಾತುಕೊಟ್ಟಳು. 1987ರ ಆಗಸ್ಟ್ 8, ಅಂದು ಬಕ್ರೀದ್ ಹಬ್ಬ. ಆ ಶುಭ ದಿನದಂದು ಆಕೆ ಪವಿತ್ರ ವಚನವನ್ನು ಉಚ್ಚರಿಸಿದಳು. ಫಾತಿಮಾ ಎಂಬ ಹೆಸರು ಸ್ವೀಕರಿಸಿದಳು. ಮರುನಿಕಾಹ್ ನಡೆಯಬೇಕಾಯಿತು. ಆಗಸ್ಟ್ 21ರಂದು ಪುನರ್ವಿವಾಹವೂ ನೆರವೇರಿತು.

## ಸಮುದಾಯ ಬಾಂಧವರಲ್ಲಿ ವಿನಮ್ರ ವಿನಂತಿ

ನನ್ನ ಮನಸ್ಸು ಇಂದಿಗೂ ತೊಯ್ದಾಡುತ್ತಿದೆ. ಕುಟುಂಬದ ಇತರ ಮಂದಿಯೂ ಇಸ್ಲಾಮ್ ಸ್ವೀಕರಿಸಬೇಕಲ್ಲವೇ ಎಂಬ ಅಳಲು ನನ್ನನ್ನು ಕೊರೆಯುತ್ತಿದೆ. ಪ್ರತಿದಿನ ಸಂದರ್ಭ ಸಿಕ್ಕಾಗಲೆಲ್ಲಾ ನಾನು ಅವರನ್ನು ಇಸ್ಲಾಮಿಗೆ ಆಹ್ವಾನಿಸುತ್ತೇನೆ. ಆದರೆ, ಅವರ ಹೃದಯಗಳಲ್ಲಿ ದೈವಿಕ ಮಾರ್ಗದರ್ಶನಕ್ಕೆ ಇನ್ನೂ ಸ್ಥಳಾವಕಾಶವಾಗಿಲ್ಲ. ನನ್ನ ಕುಟುಂಬ ಸಂಬಂಧಿಕರೆಲ್ಲರೂ ಇಸ್ಲಾಮ್ ಧರ್ಮ ಸ್ವೀಕರಿಸುವಂತಾಗಲೆಂದು ಸತ್ಯವಿಶ್ವಾಸಿಗಳು ದೇವನೊಡನೆ ಪ್ರಾರ್ಥಿಸಬೇಕೆಂದು ಕಳಕಳಿಯಿಂದ ವಿನಂತಿಸುತ್ತೇನೆ. ಅವರು ಬಂದಾರೇ? ನನ್ನ ಹೆಜ್ಜೆಯಂತೂ ಆ ಹಾದಿಯಲ್ಲಿದೆ. ನನ್ನ ನಯನಗಳು ಸನ್ಮಾರ್ಗದ ವಿಶಾಲ ದಿಗಂತದಲ್ಲಿ ನೆಟ್ಟಿದೆ. ದೇವನ ಈ ವಿನಮ್ರ ದಾಸನು ತನ್ನೊಡೆಯನು ಇಚ್ಛಿಸುವ ತನಕ ಈ ಹಾದಿಯಲ್ಲಿ ನಿರಂತರ ಪಯಣಿಸುತ್ತಾನೆ... ತರುವಾಯ ನನ್ನೊಡೆಯನು ನನಗೆ ಅತ್ಯಂತ ಶೋಭಾಯಮಾನವಾದ ಅಂತ್ಯವನ್ನು ಕರುಣಿಸುವನು.

